

# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್ ಪದವಿಯ ನಿಬಂಧ

## ನಿಬಂಧದ ವಿಷಯ

## ...ನಿಕ ಸಾಹಿತ್ಯದಲ್ಲಿ ದ್ರೌಪದಿಯ ಚಿತ್ರಣ - ಒಂದು ಅಧ್ಯಯನ"




ಮಾರ್ಗದರ್ಶಕರು

ಡಾ॥ ಕೆ. ರಮಾನಂದ

ಸಂಶೋಧನಾ ವಿದ್ಯಾರ್ಥಿ

ಶ್ರೀದೇವಿ


ವರ್ಷ

೨೦೧೧ - ೨೦೧೨




ಎಂ. ವಿ. ... ತ್ತರ ಅಧ್ಯಯನ ಕೇಂದ್ರ

... ಕ ಪ್ರತಿಷ್ಠಾನ

... ಾಲೋನಿ.

ಬ... - ೫೬೦ ೦೧೯




# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್ ಪದವಿಯ ನಿಬಂಧ

## ನಿಬಂಧದ ವಿಷಯ

## "ಆಧುನಿಕ ಸಾಹಿತ್ಯದಲ್ಲಿ ದ್ರೌಪದಿಯ ಚಿತ್ರಣ - ಒಂದು ಅಧ್ಯಯನ"




**ಮಾರ್ಗದರ್ಶಕರು**

ಡಾ॥ ಕೆ. ರಮಾನಂದ

**ಸಂಶೋಧನಾ ವಿದ್ಯಾರ್ಥಿ**

ಶ್ರೀದೇವಿ



**ವರ್ಷ**

೨೦೧೧ - ೨೦೧೨



ಎಂ. ವಿ. ಸೀ ಸ್ನಾತಕೋತ್ತರ ಅಧ್ಯಯನ ಕೇಂದ್ರ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಎನ್. ಆರ್. ಕಾಲೋನಿ,

ಬೆಂಗಳೂರು - ೫೬೦ ೦೧೯

# ಪರಿವಿಡಿ


| | | |
|---|---|---|
| ಅಧ್ಯಾಯ 1 | ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪ | ೧ - ೩ |
| ಅಧ್ಯಾಯ 2 | ಆಧುನಿಕ ಸಾಹಿತ್ಯದಲ್ಲಿ ದ್ರೌಪದಿ-ಹಿನ್ನೆಲೆ | ೪ - ೬ |
| ಅಧ್ಯಾಯ 3 | ಕಾದಂಬರಿಗಳಲ್ಲಿ ದ್ರೌಪದಿ | ೭-೧೬ |
| ಅಧ್ಯಾಯ 4 | ನಾಟಕಗಳಲಿನ್ಲ ದ್ರೌಪದಿ | ೧೭- ೨೬ |
| ಅಧ್ಯಾಯ 5 | ಕಾವ್ಯಗಳಲಿನ್ಲ ದ್ರೌಪದಿ | ೨೭- ೪೭ |
| ಅಧ್ಯಾಯ 6 | ಇತರ ಪ್ರಕಾರಗಳಲ್ಲಿ ದ್ರೌಪದಿ | ೪೮-೭೨ |
| ಅಧ್ಯಾಯ 7 | ಉಪಸಂಹಾರ | ೭೩-೭೫ |
| ಆಕರ ಗ್ರಂಥಗಳು | | ೭೬-೭೭ |

## ಅಧ್ಯಾಯ 1

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಮನುಕುಲಕ್ಕೆ ಸಾರ್ವಕಾಲಿಕ ಮಹಾಸಂದೇಶಗಳನ್ನು ಕೊಟ್ಟು ಮೌಲಿಕ ಜೀವನ ವಿಧಾನವನ್ನು, ಜೀವಂತ ದೃಷ್ಟಾಂತಗಳೊಂದಿಗೆ ಹೊಂದಿಕೊಂಡಿರುವ ಕೃತಿ ಮಹಾಭಾರತ. ಈ ಮಹಾಕಾವ್ಯದಲ್ಲಿ ಬರುವ ಹಲವು ಪಾತ್ರ ಮತ್ತು ಸನ್ನಿವೇಶಗಳು ತುಂಬಾ ಪ್ರಮುಖವಾಗಿದೆ. ಈ ಪಾತ್ರಗಳಲ್ಲಿ ವಿಭಿನ್ನ ಗುಣಗಳನ್ನು ನಾವು ಕಾಣಬಹುದು. "ಛಲವಿದ್ದರೂ, ನಿರ್ಮಲಚಿತ್ತ" ವಿಲ್ಲದ ದುರ್ಯೋಧನ. "ನಿರ್ಮಲಚಿತ್ತವಿದ್ದೂ" ಛಲವಿಲ್ಲದ ಧರ್ಮರಾಯ, ದೈಹಿಕ ಶಕ್ತಿಗೆ ಹೆಸರಾಗಿರುವ ಭೀಮ, ಮಿತ್ರತ್ವಕ್ಕೆ ಹೆಸರಾಗಿರುವ ಕರ್ಣ, ಛಲದಿಂದ ಹೋರಾಡುವ ಅರ್ಜುನ, ಪ್ರತಿಯೊಂದು ಸಲ ತುಳಿತಕ್ಕೆ ಮೈ ಒಡ್ಡಿದಾಗಲೂ ಗಟ್ಟಿಗೊಳ್ಳುವ ದ್ರೌಪದಿ. ಹೀಗೆ ವಿವಿಧ ಪಾತ್ರಗಳ, ವಿವಿಧ ಗುಣಗಳ, ರೂಪಕ ಮಹಾಭಾರತ.

ಪ್ರಸ್ತುತ ಅಧ್ಯಯನದಲ್ಲಿ 'ದ್ರೌಪದಿ' ಆಧುನಿಕ ಸಾಹಿತ್ಯದಲ್ಲಿ ತನ್ನ ಹಠದಿಂದ ಸೃಷ್ಟಿಯಾಗುತ್ತಲೇ ಹೇಗೆ ಶಾಶ್ವತವಾಗಿ ಉಳಿದು, ಆಧುನಿಕ ಹಂತದವರೆಗೂ ಬಂದಿದ್ದಾಳೆ ಎಂಬುದನ್ನು, ವಿಶ್ಲೇಷಿಸುವ ಮೂಲಕ ದ್ರೌಪದಿಯ ಪಾತ್ರವನ್ನು ಪರಿಚಯಿಸಲಾಗಿದೆ.

### <u>ಅಧ್ಯಯನದ ಉದ್ದೇಶ:</u>

ದ್ರೌಪದಿಯಷ್ಟು ಅವಮಾನ-ನೋವು ಅನುಭವಿಸಿದ ಮಹಿಳೆ ನಮ್ಮ ಇತಿಹಾಸದಲ್ಲಿ ಅಥವಾ ಪುರಾಣದಲ್ಲಿ ಬೇರೊಬ್ಬಳಿಲ್ಲ. ದ್ರೌಪದಿಗೆ ಎಂತಹ ಅಸಹಾಯಕ ಸ್ಥಿತಿ ಒದಗಿದರೂ ಅವಳು ಯಾವುದೇ ರೀತಿ ಮಾನಸಿಕವಾಗಿ ಕುಗ್ಗಲಿಲ್ಲ. ಅದರ ಬದಲಾಗಿ ಪ್ರತಿಭಟಿಸುವ ಮನೋಭಾವವನ್ನು ಕಾಣುತ್ತೇವೆ. ಅವಳ ಬದುಕಿನ ಉದ್ದಕ್ಕೂ ಹೋರಾಟ, ಪ್ರತಿಭಟನೆ ಇರುವುದರಿಂದ ದ್ರೌಪದಿಯ ಪಾತ್ರವನ್ನು ವಿವಿಧ ಪ್ರಕಾರಗಳಲ್ಲಿ ಬಿಂಬಿತವಾದ ಬಗೆಯಲ್ಲಿ ವಿಶ್ಲೇಷಿಸಲಾಗುವುದು.

ಕಾಲ ಕಳೆದಂತೆ ಸಾಹಿತ್ಯ ಪ್ರಕಾರಗಳು ಬದಲಾವಣೆ ಹೊಂದುತ್ತಾ ಬಂದಿವೆ. ಈ ಪ್ರಕಾರಗಳಲ್ಲಿ ಮಹಾಭಾರತದ ಪಾತ್ರಗಳು ಸಹ ಸಾಂಸ್ಕೃತಿಕವಾಗಿ ಭಿನ್ನಭಿನ್ನ ನೆಲೆಗಳಲ್ಲಿ ಬದಲಾವಣೆ ಹೊಂದುತ್ತಾ ಬಂದಿವೆ. ದ್ರೌಪದಿಯ ಪಾತ್ರವು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ವಿಭಿನ್ನತೆಯನ್ನು ಕಂಡುಕೊಂಡಿದೆ. ಪ್ರಸ್ತುತ ಆಧುನಿಕ ಸಾಹಿತ್ಯದಲ್ಲಿ ದ್ರೌಪದಿಯ ಪಾತ್ರದ ಚಿತ್ರಣ ಹೇಗಿದೆ ಎಂದು ತಿಳಿದುಕೊಳ್ಳುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಆಧುನಿಕ ಸಾಹಿತ್ಯದಲ್ಲಿ ದ್ರೌಪದಿಯ ವ್ಯಕ್ತಿತ್ವ, ಸ್ಥಾನ, ನಿರ್ದೇಶನ, ದ್ರೌಪದಿಯ ಪಾತ್ರದೊಂದಿಗೆ ಸೂಕ್ಷ್ಮ ಅವಲೋಕನದ ಮೂಲಕ ಸಾಹಿತ್ಯ ಮೌಲ್ಯಗಳೊಡನೆ ಶೋಧನೆ

ನಡೆಸಲಾಗಿದೆ. ಹಾಗೂ ಇತರ ಪಾತ್ರಗಳ ತುಲನೆ, ಸ್ತ್ರೀವಾದಿ ನಿಲುವಿನ ಮೂಲಕ ಅರ್ಥೈಸಿಕೊಳ್ಳುವ ಪ್ರಯತ್ನ ಪ್ರಸ್ತುತ ಉದ್ದೇಶವಾಗಿದೆ.

ದ್ರೌಪದಿ ಒಂದು ಆದಿಮ ಪ್ರತಿಮೆಯಾಗಿ ಭಾರತೀಯ ಸಾಹಿತ್ಯದಲ್ಲಿ ಮತ್ತು ಆಧುನಿಕ ಸಾಹಿತ್ಯದಲ್ಲಿ ಸ್ಥಾನ ಪಡೆದಿದ್ದಾಳೆ. ಆಧುನಿಕ ಸಾಹಿತ್ಯದಲ್ಲಿ ದ್ರೌಪದಿಯ ಪಾತ್ರದ ಸತ್ವ, ಸಾರ, ಗಟ್ಟಿತನ ಎಷ್ಟರ ಮಟ್ಟಿಗೆ ಆಧುನಿಕವಾಗಿದೆ ಎಂದು ಗ್ರಹಿಸುವ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ:**

ಈ ಅಧ್ಯಯನದ ವ್ಯಾಪ್ತಿಯು ಕಾಲ, ಭಾಷೆ, ಪಾತ್ರ ಹಾಗೂ ಸಂಶೋಧನಾ ವಿಧಾನಗಳ ದೃಷ್ಟಿಯಿಂದ ಕೆಲವು ಪರಿಮಿತಿಗಳಿಗೆ ಒಳಪಟ್ಟಿದೆ.

ಮೊದಲನೆಯದಾಗಿ ಈ ಅಧ್ಯಯನವು ಆಧುನಿಕ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿದೆ. ಆಧುನಿಕ ಸಾಹಿತ್ಯವೆಂದಾಗ ಕನ್ನಡದ ಸಂದರ್ಭದಲ್ಲಿ ಮುಖ್ಯವಾಗಿ ಕಾದಂಬರಿ, ನಾಟಕ, ಕಾವ್ಯ, ಮತ್ತು ಇತರ ಲೇಖನಗಳು.

ಸಮಕಾಲೀನ ವಸ್ತು ಪರಿಕರಗಳನ್ನು ಪರಿಗ್ರಹಿಸಿ ಕಾಲ, ದೇಶ, ಪರಿಣಾಮಗಳನ್ನು ತನಗೆ ಬೇಕಾದಂತೆ ಬದಲಾಯಿಸಿಕೊಂಡ ಕಾದಂಬರಿಗಳು. ಅಧ್ಯಯನಕ್ಕೆ ಪ್ರಾತಿನಿಧಿಕ ಮೌಲ್ಯವನ್ನು ದೊರಕಿಸಿ ಕೊಡುವ ದೃಷ್ಟಿಯಿಂದ ಎಸ್. ಎಲ್. ಭೈರಪ್ಪನವರ 'ಪರ್ವ', ಎಸ್. ವಿ. ಪ್ರಭಾವತಿಯವರ 'ದ್ರೌಪದಿ', ಸತ್ಯಕಾಮರವರ 'ಜೆಂಕಿಯ ಮಗಳು'. ಆದ್ಯ ರಾಮಾಚಾರ್ಯರವರ 'ಪಾಂಚಾಲಿ' ಕಾದಂಬರಿಗಳನ್ನು ಈ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ.

ಜಗತ್ತಿನ ಅತ್ಯಂತ ಪ್ರಾಚೀನ ಕಲೆಗಳಲ್ಲಿ ನಾಟಕ ಪ್ರಮುಖವಾದುದು. ಒಂದು ಪರಂಪರೆಯನ್ನು ಒಪ್ಪಿಕೊಂಡು ಬಂದ ನಂಬಿಕೆ, ಮೌಲ್ಯ ಹಾಗೂ ಸಾಮಾಜಿಕತೆಯನ್ನು ನಾಟಕಗಳಲ್ಲಿ ಗುರುತಿಸಬಹುದು. ದ್ರೌಪದಿಯ ಪಾತ್ರವನ್ನು ಆಧುನಿಕ ಸಾಹಿತ್ಯದ ಕನ್ನಡ ನಾಟಕಗಳಲ್ಲಿ ಹೇಗೆ ಚಿತ್ರಿಸಲಾಗಿದೆ ಎಂಬುದನ್ನು ತಿಳಿದುಕೊಳ್ಳಲು ಜಿ.ಪಿ. ರಾಜರತ್ನಂರವರ 'ಕೈಲಾಸಂ ಕೀಚಕ', ಜವರೇಗೌಡರ 'ಭೀಮನ ಗರ್ವಭಂಗ', ರಾಜಪ್ಪದಳವಾಯಿರವರ 'ಸುಯೋಧನ', ಬಿ. ಪುಟ್ಟಸ್ವಾಮಯ್ಯನವರ 'ಕುರುಕ್ಷೇತ್ರ' ಎಂಬ ನಾಟಕಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸುಮಾರು ಎಂಬತ್ತು ವರ್ಷಗಳಿಗೂ ಹೆಚ್ಚಿನ ಕಾಲದ ವಿಸ್ತೃತ ಪರಂಪರೆಯನ್ನು ಹೊಂದಿರುವ ಆಧುನಿಕ ಕನ್ನಡ ಸಾಹಿತ್ಯ ಹಲವು ಪ್ರಕಾರಗಳನ್ನು ರೂಪಿಸಿತ್ತೆನ್ನುವುದು ಇತಿಹಾಸ. ಅಂತಹ ಪರಂಪರೆಯಲ್ಲಿ

ಕಾವ್ಯ ಒಂದು ಪ್ರಕಾರ. ಕಾವ್ಯ ಪರಂಪರೆಯಲ್ಲಿ ಆಧುನಿಕ ಸಾಹಿತಿಗಳು ತಮ್ಮ ಸೃಜನಶೀಲ ಪ್ರತಿಭೆಯಿಂದ ಆಳವಾದ ಅಧ್ಯಯನ ಮತ್ತು ಕ್ರಿಯಾಶೀಲತೆಯಿಂದ ಸಾಹಿತ್ಯ ಸಂದರ್ಭಕ್ಕೆ ಹೊಸ ಮೈಲಿಗಲ್ಲು ಸೃಷ್ಟಿಸಿದ್ದಾರೆ.

ಎಷ್ಟೇ ಆಧುನಿಕತೆ ಕಂಡರೂ ಮಹಾಭಾರತದ ಪ್ರಭಾವದಿಂದ ಈ ಸಾಹಿತ್ಯ ಯುಗವು ತಪ್ಪಿಸಿಕೊಳ್ಳಲಾಗಲಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಆಧುನಿಕ ಕಾವ್ಯಗಳಲ್ಲಿ ಮಹಾಭಾರತದ ವಸ್ತು, ವಿಷಯ, ಹಾಗೂ ವ್ಯಕ್ತಿಗಳ ಪಾತ್ರಗಳನ್ನು ತಮ್ಮ ಕಾವ್ಯಗಳಲ್ಲಿ ನಿರೂಪಿಸಿಕೊಂಡಿದ್ದಾರೆ. ಹೀಗೆ ಮಹಾಭಾರತದ ಕಥೆಯನ್ನು ಕನ್ನಡ ಸಾಹಿತ್ಯದ ಪ್ರಕಾರವಾದ ಕಾವ್ಯದಲ್ಲಿ ದ್ರೌಪದಿಯ ಚಿತ್ರಣವನ್ನು ಹಲವು ಲೇಖಕಿಯರು ಚಿತ್ರಿಸಿರುವ ಕಾವ್ಯವನ್ನು ಅಧ್ಯಯನ ಮಾಡಲಾಗಿದೆ.

ಇದಲ್ಲದೆ ಇತ್ತೀಚೆಗೆ ಪ್ರಚಾರವಾಗಿರುವ ಹಲವು ಲೇಖನಗಳು, ಪ್ರಬಂಧಗಳು, ವಿಮರ್ಶೆಗಳು ಮುಂತಾದುವುಗಳನ್ನು ಸಹ ಈ ಅಧ್ಯಯನದಲ್ಲಿ ಗಮನಿಸಲಾಗಿದೆ. ಒಟ್ಟಾರೆಯಾಗಿ ಇತರ ಪ್ರಕಾರಗಳಲ್ಲಿ ಅನೇಕ ಲೇಖನಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ತೆಗೆದು ಕೊಳ್ಳಲಾಗಿದೆ.

<u>ನಿಬಂಧನದ ಸ್ವರೂಪ:</u>

ಈ ಅಧ್ಯಯನದಲ್ಲಿ ಒಟ್ಟು ಏಳು ಅಧ್ಯಾಯಗಳಲ್ಲಿ ವಸ್ತುವನ್ನು ನಿರ್ವಹಿಸಲಾಗಿದೆ. ಮೊದಲನೆಯ ಅಧ್ಯಾಯನದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಆಧುನಿಕ ಸಾಹಿತ್ಯದಲ್ಲಿ ದ್ರೌಪದಿ ಇದಕ್ಕೆ ಹಿನ್ನೆಲೆಯಾಗಿ ವ್ಯಾಸ, ಪಂಪ, ರನ್ನ, ಮತ್ತು ಕುಮಾರವ್ಯಾಸ ಇವರು ಕಂಡ ದ್ರೌಪದಿಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಾದಂಬರಿಗಳಲ್ಲಿ ದ್ರೌಪದಿ ಎಂಬ ವಿಷಯವನ್ನು ವಿಶ್ಲೇಷಿಸಲಾಗಿದೆ. ಇದಕ್ಕೆ ಪೂರಕವಾಗಿ ಎಸ್. ಎಲ್. ಭೈರಪ್ಪನವರ 'ಪರ್ವ', ಸತ್ಯಕಾಮರ 'ಬೆಂಕಿಯ ಮಗಳು', ಎಸ್. ವಿ. ಪ್ರಭಾವತಿಯವರ 'ದ್ರೌಪದಿ', ಮತ್ತು ಬಲರಾಮಚಾರ್ಯರವರ 'ಪಾಂಚಾಲಿ' ಕಾದಂಬರಿಗಳನ್ನು ಆಕರಗಳಾಗಿ ಇಟ್ಟುಕೊಂಡು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಆಧುನಿಕ ನಾಟಕಗಳಲ್ಲಿ ವಿವಿಧ ನಾಟಕಕಾರರು ಕಂಡ ದ್ರೌಪದಿಯ ಪಾತ್ರವನ್ನು ಚರ್ಚಿಸಲಾಗಿದೆ. ಇಲ್ಲಿ ಜಿ.ಪಿ. ರಾಜರತ್ನಂರವರ 'ಕೈಲಾಸಂ ಕೀಚಕ', ಗುಂಡ್ಲು ಪೇಟೆ ಜವರೇಗೌಡರ 'ಭೀಮನ ಗರ್ವಭಂಗ', ರಾಜಪ್ಪ ದಳವಾಯಿರವರ 'ಸುಯೋಧನ', ಬಿ.ಪುಟ್ಟಸ್ವಾಮಯ್ಯ ನವರ 'ಕುರುಕ್ಷೇತ್ರ' ಮತ್ತು ಮರಡಿಹಳ್ಳಿ ಸೀತಾರಾಮರೆಡ್ಡಿಯವರ 'ಪೌರಾಣಿಕ ನಾಟಕಗಳು' ಮೊದಲಾದ ನಾಟಕಗಳನ್ನು ಆಧರಿಸಿ ದ್ರೌಪದಿಯ ಚಿತ್ರಣವನ್ನು ಮೂಡಿಸಲಾಗಿದೆ.

ಐದು ಮತ್ತು ಆರನೆಯ ಅಧ್ಯಾಯದಲ್ಲಿ ಆಧುನಿಕ ಕಾವ್ಯಗಳಲ್ಲಿ ಮತ್ತು ಇತರ ಪ್ರಕಾರಗಳಲ್ಲಿ ದ್ರೌಪದಿಯ ಪಾತ್ರವನ್ನು ವಿಶ್ಲೇಷಿಸಿ ಚಿತ್ರಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಪರಿಣಾಮಗಳನ್ನು ಉಪಸಂಹಾರದೊಂದಿಗೆ ನೀಡಲಾಗಿದೆ.

## ಅಧ್ಯಾಯ 2

## ಆಧುನಿಕ ಸಾಹಿತ್ಯದಲ್ಲಿ ದ್ರೌಪದಿ–ಹಿನ್ನೆಲೆ

ಆಧುನಿಕ ಸಾಹಿತ್ಯದಲ್ಲಿ ದ್ರೌಪದಿಯ ಚಿತ್ರಣಕ್ಕೆ ಹಿನ್ನೆಲೆಯಾಗಿ ಆಧುನಿಕ ಪೂರ್ವ ಸಾಹಿತ್ಯದಲ್ಲಿ ದ್ರೌಪದಿಯ ಪಾತ್ರವನ್ನು ತಿಳಿದು ಕೊಳ್ಳುವುದು ಸ್ವಲ್ಪ ಮಟ್ಟಿಗೆ ಮಹತ್ವದಾಗಿದೆ. ಈ ಹಿನ್ನೆಲೆಯಲ್ಲಿ ವ್ಯಾಸಭಾರತ, ಪಂಪಭಾರತ. ರನ್ನನ ಗದಾಯುದ್ಧ ಮತ್ತು ಕುಮಾರವ್ಯಾಸನ ಕರ್ನಾಟ ಭಾರತ ಕಥಾಮಂಜರಿಯಲ್ಲಿ ದ್ರೌಪದಿಯು ಹೇಗೆ ಚಿತ್ರಿತವಾಗಿದ್ದಾಳೆಂದು ಸಂಕ್ಷಿಪ್ತವಾಗಿ ಈ ಕೆಳಕಂಡಂತೆ ವಿವರಿಸಲಾಗಿದೆ.

ಮಹಾಭಾರತಕ್ಕೆ ಸಂಬಂಧ ಪಟ್ಟಂತೆ ಯಾವುದೇ ವಿಷಯ ತಿಳಿಯಬೇಕಾದರೆ ನಾವು ವ್ಯಾಸ ಭಾರತವನ್ನು ಹಿನ್ನೆಲೆಯಾಗಿ ತಿಳಿಯಬೇಕಾದ್ದು ಅತ್ಯಗತ್ಯ ವ್ಯಾಸಭಾರತದಲ್ಲಿ ದ್ರೌಪದಿಯ ಪಾತ್ರವು ವಿಶಿಷ್ಟವಾಗಿರುದಕ್ಕೆ ಅವಳ ಪಂಚಪತಿತ್ವವೇ ಕಾರಣ. ಅವಳ ಸ್ವಭಾವದ ಇತರ ವಿಶಿಷ್ಟ ಅಂಶಗಳೇನಿದ್ದರೂ ಇದಕ್ಕೆ ಪೂರಕ. ಪಂಚಪತಿತ್ವ ಅಥವಾ ಬಹುಪತಿತ್ವ ಮಹಾಭಾರತ ಕಾಲದಲ್ಲಿ ಇದ್ದ ಸಾಮಾಜಿಕ ಪದ್ಧತಿಯಲ್ಲಿ ಇರಬಹುದು. ಇಲ್ಲದೆಯೂ ಇರಬಹುದು. ಆದರೆ ಕಥೆ ಕೃತಿರೂಪಕ್ಕೆ ಇಳಿಯುವ ವೇಳೆಗೆ ಜನರ ಮನಸ್ಸಿನಲ್ಲಿ ಈ ಪದ್ಧತಿಯ ಬಗ್ಗೆ ಹಿತಕರವಲ್ಲದ ಭಾವನೆ ಬೆಳೆದಿತ್ತೆಂಬುದಕ್ಕೆ ಮಹಾಭಾರತದಲ್ಲಿಯೇ ಸಾಕಷ್ಟು ಪುರಾವೆಗಳಿವೆ.

ಬಹುಪತಿತ್ವದ ಭಾರದಡಿಯಲ್ಲಿ ಸಿಕ್ಕಿಯೂ ದ್ರೌಪದಿ ಹೇಗೆ ಪತಿವ್ರತೆಯಾಗಿ ಉಳಿಯುತ್ತಾಳೆ? ಎಂಬುದಕ್ಕೆ ಅವಳ ಪಾತ್ರದ ಇನ್ನೊಂದು ಆಯಾಮ ಕಲ್ಪಿಸಿದೆ. ದ್ರೌಪದಿಯು ಹೇಗೆ ಪತಿವ್ರತೆಯಾಗಿ ಉಳಿಯುತ್ತಾಳೆ ಎಂಬುದಕ್ಕೆ ದ್ರೌಪದಿಯ ಮಾತಿನಲ್ಲಿ ಕೆಲವು ಮುಖ್ಯ ಸೂತ್ರಗಳು ವಿವರಿಸಲಾಗಿದೆ "ಸ್ತ್ರೀಯಾದವಳು ಪತಿಗೆ ಅಹಿತವಾದ ಕಾರ್ಯವನ್ನು ಮಾಡದೆ ಇರಬೇಕು. ನಾನು ಅಹಂಕಾರವನ್ನು ಬಿಟ್ಟು ಕಾಮ. ಕ್ರೋಧ ಇಲ್ಲದೆ ನನ್ನ ಗಂಡಂದಿರನ್ನು ಅವರು ಇತರ ಹೆಂಡಿರೊಂದಿಗೆ ಇರುವ ಸಂಬಂಧವನ್ನು ಬೆಳೆಸುತ್ತೇನೆ. ಸೇವೆಯಲ್ಲಿ ಸಲಿಗೆಯನ್ನು ತೆಗದುಕೊಂಡು ಈ ಕೆಲಸ ಕಿರಿದು. ಹಿರಿದು ಎನ್ನದಂತೆ ಅವರ ಮನಸ್ಸನ್ನು ಅನುಸರಿಸಿದ್ದೇನೆ. ದೇವ. ಮನುಷ್ಯ, ಗಂಧರ್ವ, ತರುಣರು, ಶ್ರಿಮಂತರೂ ಯಾರೆ ಆಗಲಿ ನನ್ನ ಪಾಲಿಗೆ ಗಂಡನಲ್ಲ. ಅತಿರೋಷಗಳನ್ನು ಕ್ರೋಧ ಸ್ಥಾನಗಳನ್ನು ತೊರೆದಿದ್ದೇನೆ. ಸದಾ ಗಂಡಂದಿರ ಉಪಸೇವೆಯಲ್ಲಿ ನಿರತಳಾಗಿದ್ದೇನೆ." (*.1)

ಕನ್ನಡದ ಆದಿಕವಿ ಪಂಪನ ಎರಡನೆ ಕೃತಿ 'ಪಂಪ ಭಾರತ' ಅಥವಾ 'ವಿಕ್ರಮಾರ್ಜುನವಿಜಯ' ಪರಿಚಿತವಾದ ಕಾವ್ಯವಾಗಿದೆ. ಪಂಪ ಮೂಲ ಮಹಾಭಾರತದಲ್ಲಿ ಬದಲಾವಣೆ ಮಾಡಿಕೊಂಡು ಅರ್ಜುನನ

---

(*1 ಡಾ. ಎಸ್. ಪಿ. ಪ್ರಭಾವತಿ. 'ದ್ರೌಪದಿ'. ಪುಟ ಸಂಖ್ಯೆ 4)

ಪಾತ್ರಕ್ಕೆ ಹೆಚ್ಚು ಒತ್ತು ಕೊಟ್ಟು ದ್ರೌಪದಿಯ ಪಾತ್ರಕ್ಕೆ ಕುಂದು ಬಾರದಂತೆ ನೋಡಿಕೊಂಡ. ಆದರೂ ಸಹ ದ್ರೌಪದಿಯ ಪಾತ್ರಕ್ಕೆ ಅನ್ಯಾಯವಾಗದಂತೆ ತಡೆಯುವುದು ಅವನಿಂದ ಆಗಲಿಲ್ಲ. ಅದೇನೆಂದರೆ ಅರ್ಜುನನೊಂದಿಗೆ ಸಿಂಹಾಸನದಲ್ಲಿ ಕುಳಿತು ಪಟ್ಟಾಭಿಷೇಕ ಮಾಡಿಸಿಕೊಳ್ಳವ ಯೋಗ ದ್ರೌಪದಿಗೆ ತಪ್ಪಿ ಹೋಗಿ ಸುಭದ್ರೆಗೆ ಆಯಿತು. ಈ ಕಾರಣಕ್ಕೆ ಯಾವುದೇ ರೀತಿ ಸಮರ್ಥನೆ ಕೊಡಲು ಪಂಪನಿಗೆ ಸಾಧ್ಯವಾಗಲಿಲ್ಲ. ಮಹಾಭಾರದಲ್ಲಿ ಕೇವಲ ಲೌಕಿಕ ದೃಷ್ಟಿಯುಳ್ಳ ಪಂಪನಿಗೆ ಅಂದಿನ ಲೌಕಿಕ ಪದ್ಧತಿಗೆ ವಿರುದ್ಧವಾಗಿ ದ್ರೌಪದಿಗೆ ಅರ್ಜುನ ಒಬ್ಬನೆ ಗಂಡ ಎಂದು ಬದಲಾವಣೆ ಮಾಡಿಕೊಂಡಿದ್ದಾನೆ.

'ಗದ್ದಾಯುದ್ಧ'ವೆಂದೇ ಪ್ರಸಿದ್ಧವಾದ 'ಸಾಹಸಭೀಮ ವಿಜಯ' ರನ್ನನ ಒಂದು ಪ್ರಮುಖ ಕಾವ್ಯ, ಇದು ಪಂಪನ ವಿಕ್ರಮಾರ್ಜನ ವಿಜಯದಿಂದಲೇ ಪ್ರೇರಿತವಾಗಿದೆ. ಗದಾಯುದ್ಧದಲ್ಲಿ ಭೀಮನೇ ಮುಖ್ಯ ಪಾತ್ರ, ಇತರ ಪಾತ್ರಗಳಿಗೆ ಇಲ್ಲಿ ಪ್ರಾಶಸ್ತ್ಯವೇ ಸಿಕ್ಕುವುದಿಲ್ಲ. ಆದರೂ ಸಹ ರನ್ನನ ಕಾವ್ಯದಲ್ಲಿ ದ್ರೌಪದಿಯ ಪಾತ್ರಕ್ಕೆ ಅನ್ಯಾಯ ಮಾಡಿಲ್ಲ. ದುರ್ಯೋಧನನೊಬ್ಬನುಳಿದಿದ್ದಾನೆ. ಎಂಬ ತಳಮಳದಿಂದ ಹಿಡಿದು ದುರ್ಯೋಧನನ ವಧೆಯವರೆಗೂ ಮುಖ್ಯ ಪಾತ್ರವಾಗಿಯೇ ಉಳಿಯುವ ದ್ರೌಪದಿ ಕೊನೆಯಲ್ಲಿ ಭೀಮನೊಂದಿಗೆ ಪಟ್ಟಾಭಿಷಕ್ತಳಾಗುತ್ತಾಳೆ. ರನ್ನನ ಪ್ರಸಂಗದಲ್ಲಿ ಬಂದ ದ್ರೌಪದಿ ಮತ್ತೆ ಬರುವುದು ಕೊನೆಯ ಅಧ್ಯಾಯದಿಂದಲೇ. ರನ್ನನ ಪ್ರಕಾರ ಭೀಮನು ವಾಯುಪುತ್ರನಾದರೆ, ದ್ರೌಪದಿಯು ಅಗ್ನಿಪುತ್ರಿಯಾಗಿದ್ದಾಳೆ. ಭೀಮನು ಅವಳಲ್ಲಿರುವ ಉರಿಯನ್ನು ಮತ್ತೊಷ್ಟು ಉಜ್ವಲಗೊಳಿಸುತ್ತಾನೆ. ದ್ರೌಪದಿಯ ಕೋಪ ಭೀಮನ ಶೌರ್ಯವನ್ನು ವರ್ಧಿಸುತ್ತದೆ. ರನ್ನನ ಗದಾಯುದ್ಧದಲ್ಲಿ ದ್ರೌಪದಿಯ ನೋವು ಭೀಮನನ್ನು ತಟ್ಟಿದಂತೆ ಉಳಿದವರನ್ನು ತಟ್ಟಲಿಲ್ಲ. ಇಲ್ಲಿ ದ್ರೌಪದಿ ಮತ್ತು ಭೀಮರ ನಡುವಿನ ಸಂಬಂಧಗಳ ಕೆಲವು ವೈಲಕ್ಷಣಗಳನ್ನು ಗುರುತಿಸಲಾಗಿದೆ.

ವ್ಯಾಸ ಭಾರತವನ್ನು ಪಂಪ, ರನ್ನರು ಕನ್ನಡಕ್ಕೆ ತಂದ ನಂತರ ಮತ್ತೇ ಅದೇ ಕಾರ್ಯವನ್ನು ಕುಮಾರವ್ಯಾಸ ಭಿನ್ನ ದೃಷ್ಟಿಕೋನದಲ್ಲಿ 'ಕರ್ನಾಟ ಭಾರತಕಥಾ ಮಂಜರಿ' ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಕುಮಾರವ್ಯಾಸನ ಭಾರತಕ್ಕೆ ಕೃಷ್ಣನ ಪಾತ್ರವೇ ಪ್ರಮುಖವಾದರೂ ದ್ರೌಪದಿಯ ಪಾತ್ರದ ಮಹತ್ವಕ್ಕೆ ಧಕ್ಕೆ ಬಂದಿಲ್ಲ. ಕೃಷ್ಣನ ನಂತರ ಎರಡನೆಯ ಸ್ಥಾನ ದ್ರೌಪದಿಗೆ ಮೀಸಲು. ದ್ರೌಪದಿಗೂ ಕೃಷ್ಣನಿಗೂ ನಡುವೆ ಇರುವ ಭಕ್ತಿಯ ಕೊಂಡಿಗಳಂತೆ ದೈವಭಕ್ತಿ, ಪತಿವ್ರತೆ ಎದ್ದು ಕಾಣುವ ವಿಶೇಷಗುಣಗಳು ದ್ರೌಪದಿಯಲ್ಲಿವೆ. ಸೌಂದರ್ಯ ಮತ್ತು ರಾಜ ಸ್ವಭಾವ ದ್ರೌಪದಿಗೆ ಕಳೆಗಟ್ಟುವ ಅಂಶಗಳು ಕುಮಾರವ್ಯಾಸ ಭಾರತದಲ್ಲಿ ಕಾಣಬಹುದು. ಅವನು ತನ್ನ ಕಾವ್ಯದಲ್ಲಿ ಕೃಷ್ಣನ ಪರಮಭಕ್ತೆಯಾಗಿ, ಪರಮ ಪತಿವ್ರತೆಯಾಗಿ ದ್ರೌಪದಿಯನ ಚಿತ್ರಿಸಿದ್ದಾನೆ. ದ್ರೌಪದಿಯ ಪಂಚಪತಿತ್ವದ ಪ್ರಶ್ನೆ ಎದುರಾದಾಗ ಕುಮಾರವ್ಯಾಸನು ವ್ಯಾಸರನ್ನೆ ನೇರವಾಗಿ

ಅನುಸರಿಸಿದ್ದರೂ ವಿವರಗಳನ್ನು ಸಂಕ್ಷಿಪ್ತವಾಗಿಸುವಲ್ಲಿ ಮತ್ತು ಸ್ವಾರಸ್ಯಮಯವಾಗಿಸುವಲ್ಲಿ ಸಫಲವಾಗಿದ್ದಾನೆ. ದ್ರೌಪದಿಯ ಅಪಹರಣದ ಬಗ್ಗೆ ಮಹಾಭಾರತದಲ್ಲಿ ಪ್ರಕ್ಷಿಪ್ತವೆಂದು ವಿದ್ವಾಂಸರ ಅಭಿಪ್ರಾಯಪಟ್ಟರೇ ಕುಮಾರವ್ಯಾಸನ ಕಾವ್ಯದಲ್ಲಿ ಇದು ದೀರ್ಘವಾಗಿ ವರ್ಣಿತವಾಗಿದೆ.

ಸಂಪ್ರದಾಯ ನಿಷ್ಠೆಗೆ ಪ್ರತೀಕವಾದ ಕುಮಾರವ್ಯಾಸ ಭಾರತದಲ್ಲಿ ಪಂಪ ರನ್ನರ ಕಾವ್ಯಗಳಲ್ಲಿ ನಿರೀಕ್ಷಿಸಿದಂತೆ ಹೊಸದೇನನ್ನು ನಿರೀಕ್ಷಿಸುವುದು ತಪ್ಪಾಗುತ್ತದಾದರೂ ದ್ರೌಪದಿಯ ಪಾತ್ರಕ್ಕೆ ಸಂಬಂಧಿಸಿದಂತೆ ಸನ್ನಿವೇಶ ನಿರ್ಮಾಣದಲ್ಲಿ ಕಂಡು ಬರುವ ರಸೋತ್ಕರ್ಷ ಮತ್ತು ಭಕ್ತಿ ಪ್ರಖರತೆ ಎರಡೂ ಸೇರಿ ಅವಳ ಪಾತ್ರವನ್ನು ಕಳೆಗಟ್ಟಿಸಿದೆ. ಮೂಲ ರೂಪಾತ್ಮಕ ಪ್ರತಿಮೆಯಾಗಿ ಮಹಾಭಾರತದಲ್ಲಿ ಕಂಡು ಬರುವ ದ್ರೌಪದಿ ಪಂಪ ರನ್ನರಲ್ಲಿ ಕಡೆದ ಶಿಲ್ಪವಾಗಿ ಮಾರ್ಪಾಡಾದರೆ ಅದಕ್ಕೆ ಕುಸುರಿ ಕೆಲಸ ಮಾಡಿ ಜೀವ ತುಂಬಿದ್ದು ಕುಮಾರವ್ಯಾಸನ ಹಿರಿಮೆ.

ಒಟ್ಟಿನಲ್ಲಿ ಮಹಾಭಾರತದಲ್ಲಿ ಮೂಲ ರೂಪತ್ಮಾಕ ಪ್ರತಿಮೆಯಾಗಿದ್ದ ದ್ರೌಪದಿ ಪಂಪ ಭಾರತದಲ್ಲಿ ಹೊಳೆದು ತೋರಿದರೆ, ಗದಾಯುದ್ಧದಲ್ಲಿ ವಿಜೃಂಭಿಸಿದರೆ, ಕುಮಾರವ್ಯಾಸನಲ್ಲಿ ಪರಮಭಕ್ತೆಯಾಗಿ ಹಲವು ಆಯಾಮದ ಪ್ರತೀಕವಾಗಿದ್ದಾಳೆ.

## ಅಧ್ಯಾಯ 3

## ಕಾದಂಬರಿಗಳಲ್ಲಿ ದ್ರೌಪದಿ

ಕಾದಂಬರಿ ಸಾಹಿತ್ಯ ಪ್ರಕಾರಗಳಲ್ಲಿ ಒಂದು. ಈ ಸಾಹಿತ್ಯ ಪ್ರಕಾರ ಪಾಶ್ಚಾತ್ಯರಿಂದಲೇ ಭಾರತೀಯರಿಗೆ ಪರಿಚಯವಾಗಿ ಬಂದಿದೆ. ಭಾರತೀಯ ಭಾಷೆಗಳಿಗೆ ಆಧುನಿಕ ಸಾಹಿತ್ಯ ಸೃಷ್ಟಿಗೆ ಇಂಗ್ಲೀಷ್ ಮಾದರಿಯಾಯಿತು. ಅದನ್ನೇ ಅನುಸರಿಸುತ್ತಾ, ಅಲ್ಲಿನ ಸಾಹಿತ್ಯ ಪ್ರಕಾರಗಳನ್ನೇ ನಮ್ಮಲ್ಲಿಯೂ ಬಳಕೆ ಮಾಡಿಕೊಂಡು ಬಂದರು. ಹಾಗೆ ಬಂದ ಪ್ರಕಾರಗಳಲ್ಲಿ ಕಾದಂಬರಿಯೂ ಒಂದು. ಹೊಸ ಪ್ರಕಾರವಾದ ಕಾದಂಬರಿಗಳಲ್ಲಿ ಹೊಸ ಆಸೆ, ಆಕಾಂಕ್ಷೆ, ಸಂಕಲ್ಪಗಳನ್ನು ಚಿಮ್ಮಿಸಲಾಯಿತು.

ಹೀಗೆ ಬೆಳೆದು ಬಂದ ಕಾದಂಬರಿಯನ್ನು ಅನೇಕ ಸಾಹಿತ್ಯಕಾರರು ತಮ್ಮ ಅಭಿವ್ಯಕ್ತಿಗೆ ಬಳಸಿಕೊಳ್ಳಲು ಮುಂದಾದರು. ಸೂಕ್ತ ವಸ್ತುವನ್ನು ಆಯ್ಕೆ ಮಾಡಿಕೊಳ್ಳುವುದರ ಜೊತೆಗೆ ಹಲವು ಪೌರಾಣಿಕ ಪಾತ್ರಗಳನ್ನು ಆಧುನಿಕ ಕಾಲಕ್ಕೆ ಹೊಂದಿಕೊಂಡಂತೆ ರೂಪಿಸಿದರು. ಒಂದೊಂದು ಪಾತ್ರಕ್ಕೂ ತಮ್ಮದೆ ಆದ ಶೈಲಿಯಲ್ಲಿ ವಿಭಿನ್ನ ನೆಲೆಗಳಲ್ಲಿ ಗುರುತಿಸುತ್ತಾ ಬಂದರು. ಅಂತಹ ಪಾತ್ರಗಳಲ್ಲಿ 'ದ್ರೌಪದಿ'ಯ ಪಾತ್ರವೂ ಒಂದು. ಈ ಪಾತ್ರವನ್ನು ಕಾದಂಬರಿಕಾರರು ಆಧುನಿಕಕ್ಕೆ ಹೇಗೆ ಸಮನ್ವಯಗೊಳಿಸಿಕೊಂಡಿದ್ದಾರೆ ಎಂಬುದು ಕುತೂಹಲಕರ. "ಪುರಾಣದ ಪಾತ್ರಗಳಂತೆ ಕಾದಂಬರಿಯ ಪಾತ್ರಗಳು ಸುಲಭವಾಗಿ ಶೈಲೀಕೃತವಗುವುದಿಲ್ಲ. ಮಹಾಕಾವ್ಯದ ಕೇಂದ್ರವಸ್ತು ದಂತಕಥೆಯಾಗಿ ಹೋದ ನಿನ್ನೆಯಾದರೆ, ಕಾದಂಬರಿಯ ವಸ್ತು ವೈಶಿಷ್ಟ್ಯವನ್ನು ಹೊಂದಿದ ಇವತ್ತು. ಪುರಾಣದ ಶೈಲಿ ಕಥೆ ಹೇಳುವ ಶೈಲಿಯಾದರೆ, ಕಾದಂಬರಿಯ ಶೈಲಿ ವರ್ಣನೆಯ ರೀತಿಯದು"(*1) ಎನ್ನುವಾಗ ಪುರಾಣ–ಕಾದಂಬರಿಗಳ ಮಧ್ಯೆ ಇರುವ ಮೂಲಭೂತ ವ್ಯತ್ಯಾಸ ಸ್ಫುಟವಾಗುತ್ತದೆ. ಪುರಾಣದ ವಸ್ತು ಕಾದಂಬರಿಯಾಗಿ ರೂಪ ಪಡೆದಾಗ ಅನುಕೂಲ–ಅನನುಕೂಲಗಳೆರಡೂ ಇವೆ ಎನ್ನುವುದನ್ನೂ ಈ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ.

ಮಹಾಕಾವ್ಯಗಳಾದ ರಾಮಾಯಣ–ಮಹಾಭಾರತಗಳು ಧಾರ್ಮಿಕ ಚೌಕಟ್ಟಿಗೆ ಹೊಂದಿಕೊಂಡ ಕೃತಿಗಳು. ಅಲ್ಲಿ ಸಾಹಿತ್ಯಿಕ ಅನುಭವವು ಆನುಷಂಗಿಕವಾಗಿಯೇ ಉಳಿಯುತ್ತದೆ. ಇವುಗಳಿಂದ ಆಯ್ದು ಕೊಂಡ ವಸ್ತುಗಳು ಕಾದಂಬರಿಯಾಗಿ ಮೈದಳೆದಾಗ ವಿಶಿಷ್ಟ ಪರಿಸರದಲ್ಲಿ ಮೂರ್ತವಾಗುವ ಬದುಕಿನತ್ತ ಸಾಹಿತಿಯ ಲಕ್ಷ್ಯವಿರುತ್ತದೆ.

ದ್ರೌಪದಿಯು ತನ್ನ ಬದುಕಿನ ಉದ್ದಕ್ಕೂ ನಡೆಸಿದ ಹೋರಾಟ, ಸಂಘರ್ಷ, ನೋವು, ದುಃಖಗಳನ್ನು ಅನೇಕ ಕಾದಂಬರಿಕಾರು ಚಿತ್ರಿಸುತ್ತಾ ಬಂದಿದ್ದಾರೆ.

---

(*1 ಅಮೂರ ಜಿ. ಎಸ್. ಕನ್ನಡ ಕಥನ ಸಾಹಿತ್ಯ 1984, ಪು. ಸ.3)

ಎಸ್.ಎಲ್.ಭೈರಪ್ಪನವರು ತಮ್ಮ ಕಾದಂಬರಿ ಪರ್ವದಲ್ಲಿ ದ್ರೌಪದಿಯನ್ನು ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾರೆ. ಮಹಾಭಾರತದ ಸಂಕೀರ್ಣ ಪ್ರಪಂಚವನ್ನು ಮಾತ್ರ ತೆಗೆದುಕೊಂಡು ಭೈರಪ್ಪನವರು ತಮ್ಮ ಕಾದಂಬರಿಯನ್ನು ರಚಿಸಿದ್ದಾರೆ. "ಇಲ್ಲಿ ಸಾಹಿತಿಗೆ ಬೇಕಾದ ಸತ್ಯ ಯಾವುದು? ಹೆಂಡಿರನ್ನು ಕೆಣಕ ಬಂದವನನ್ನು ಕೊಂದು ಮುಗಿಸಬೇಕೆಂಬ ಸಾರ್ವತ್ರಿಕ ಪುರುಷ ಭಾವ ಅಥವಾ ಪುರುಷ ಅಹಂಕಾರ, ಪುರುಷ ಯಜಮಾನ್ಯವು ಸಾಹಿತ್ಯದ ವಸ್ತುವಲ್ಲವೆ?"(*2) ಈ ಮಾತುಗಳಲ್ಲಿ ಅವರ ವ್ಯಾಪ್ತಿಯು ಕಾಲ ದೇಶಗಳನ್ನು ಮೀರುವ ಸೂಚನೆಯಿದ್ದಂತೆಯೇ ಹೆಣ್ಣನ್ನು ಸೊತ್ತಾಗಿ, ರಕ್ಷಣೆಯನ್ನು ನೀರಿಕ್ಷಿಸುವ ಅಬಲೆಯಾಗಿ ಕಾಣುವ ಪ್ರವೃತ್ತಿಯೂ ಕಂಡುಬರುತ್ತದೆ.

ಪರ್ವ ಕಾದಂಬರಿ ಪ್ರಾರಂಭವಾಗುವ ಕಾಲಕ್ಕೆ ಕಥೆಯ ಹಂದರದಲ್ಲಿ ಅಜ್ಞಾತವಾಸ ಆದಾಗಲೇ ಮುಗಿದಿರುತ್ತದೆ. ಮಹಾಯುದ್ಧದ ಸಿದ್ಧತೆಯೊಂದಿಗೆ ಕಾದಂಬರಿಯ ಕಥಾನಕ ಪ್ರಾರಂಭವಾಗುತ್ತದೆ. ಇಲ್ಲಿಂದ ಮುಂದೆ ಹಿನ್ನೋಟದ ತಂತ್ರದ ಮೂಲಕ ಪ್ರಜ್ಞೆಗಳ ಪ್ರವಾಹಗಳ ಒಂದರ ಹಿಂದೊಂದು ಹರಿದು ಬರುತ್ತದೆ.

ಈ ಪ್ರಜ್ಞಾಪ್ರವಾಹ ಎನ್ನುವುದು ಪಾತ್ರಚಿತ್ರಣದ ಒಂದು ವಿಧಾನ, ತಂತ್ರವಲ್ಲ. ಪ್ರಜ್ಞೆಯ ಹರಿವನ್ನು ಹಲವಾರು ಬಗೆಯ ತಂತ್ರಗಳನ್ನು ವಿಶಿಷ್ಟ ರೀತಿಯಲ್ಲಿ ಬಳಸಿಕೊಳ್ಳಲು ಸಾಧ್ಯವಿದೆ. ಈ ಅಭಿಪ್ರಾಯ ಹಿನ್ನೆಲೆಯಲ್ಲಿ ಪರ್ವದಲ್ಲಿ ಬಳಕೆಯಾದ ವಿಧಾನ ಹೌದೇ ಎನ್ನುವುದುನ್ನು ನಿರ್ಧರಿಸಬೇಕಾಗುತ್ತದೆ. ಇದರ ಲಕ್ಷಣಗಳಲ್ಲಿ ಒಂದಾದ ಸ್ವಗತಗಳ ಬಳಕೆಯನ್ನು ಪರ್ವವು ವ್ಯಾಪಕವಾಗಿ ಮಾಡುತ್ತದೆ. ಆದರೆ ಅಲ್ಲಿನ ಸ್ವಗತಗಳನ್ನು ಚಿರಪರಿಚಿತವಾದ ಮಹಾಭಾರತದ ಕಥೆಯೇ ನಿಯಂತ್ರಿಸುತ್ತಾ ಹೋಗುತ್ತದೆ. ಎನ್ನುವ ಅಭಿಪ್ರಾಯವನ್ನು ಪರಿಗಣಿಸ ಬೇಕಾಗುತ್ತದೆ. ಒಟ್ಟಿನಲ್ಲಿ ಭೈರಪ್ಪನವರು ಪ್ರಜ್ಞಾಪ್ರವಾಹದ ಒಂದು ಮಾದರಿಯನ್ನು ಬಳಸಿದ್ದಾರೆ ಎನ್ನಬಹುದು.

ಈ ಕಾದಂಬರಿಯಲ್ಲಿ ಭಾರತದ ಪಾತ್ರಗಳ ಕಥೆಯ ಬದಲಿಗೆ ಮಾನವ ಅನುಭವದ ವಿವಿಧ ರೂಪ, ಮಾನವ ಸಂಬಂಧ ಸ್ವರೂಪ ಮತ್ತು ವಿವೇಚನೆಗಳನ್ನು ಚಿತ್ರಿಸಲಾಗಿದೆ. ಇಲ್ಲಿಯೂ ಕೂಡ ದ್ರೌಪದಿಯನ್ನೆ ಕೇಂದ್ರವಾಗಿಟ್ಟುಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಉಳಿದೆಲ್ಲಾ ಪಾತ್ರಗಳನ್ನು ದ್ರೌಪದಿಯ ಅನುಭವಗಳ, ಪ್ರತಿಕ್ರಿಯೆಗಳ ಮೂಲಕವೇ ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ.

ಈ ಕಾದಂಬರಿಯಲ್ಲಿ ಸ್ವಲ್ಪ ಹೆಚ್ಚಿನ ಹೆಣ್ತನವನ್ನು ತೋರಿಸುವ ಸಂದರ್ಭಗಳನ್ನು ಕಾಣುತ್ತೇವೆ. ಅವಳು ಆರ್ಯ ಸಂಸ್ಕೃತಿಯ ಪ್ರತೀಕವಾಗಿದ್ದಾಳೆ. ಅವಳ ಬಗ್ಗೆ ಭೀಮನ ಚಿಂತನೆ ಹರಿಯುವ ದಿಕ್ಕನ್ನು ಗಮನಿಸಿದಾಗ ಈ ಅಂಶವು ಸ್ಪಷ್ಟವಾಗುತ್ತದೆ. "ಇವಳು ಎಲ್ಲಿ ಬಾಡಿ ಹೋದೀತೊ ಎಂದು ಹಗುರವಾಗಿ ಹಿಡಿದು ಸೂಕ್ಷ್ಮವಾಗಿ

(*2 ಎಸ್. ಎಲ್. ಭೈರಪ್ಪ 'ಪರ್ವ' ಪು.ಸ.11)

ಮೂಸಿ ಸಂತೋಷಿಸಬೇಕಾದ ಹೂವು. ಇವಳ ಚಳಕವೇನಿದ್ದರೂ ಮಾತಿನಲ್ಲಿ, ಹುಬ್ಬುಗಳ ಕೊಂಕಿನಲ್ಲಿ ಕಣ್ಣಹನಿಗಳ ನಿಶ್ಶಬ್ದತೆಯಲ್ಲಿ. ಕೃಷ್ಣೆ ಎಂದರೆ ಅಸಹಾಯಕಳು, ಆರ್ಯಳು. ಆದರೂ ಅವಳ ಮಾತನ್ನು ಮೀರಲಾಗುವುದಿಲ್ಲ. ಅವಳನ್ನು ರಕ್ಷಿಸುವುದೇ ಅವಳ ಅಪಮಾನಕರನ್ನು ಶಿಕ್ಷಿಸುವುದೇ ಅವಳ ಇಚ್ಛೆಯನ್ನು ಅರಿತು ಪೂರೈಸುವುದೇ ನನ್ನ ಪುರುಷತ್ವದ ಗುರಿ ಎನ್ನಿಸುತ್ತದೆಯಲ್ಲ"(*3). ಅವಳ ಬಗ್ಗೆ ಭೀಮನ ಚಿಂತನೆಯು ಹರಿಯುವ ದಿಕ್ಕನ್ನು ಗಮನಿಸಿದಾಗ ಈ ಅಂಶವು ಸ್ಪಷ್ಟವಾಗುತ್ತದೆ.

ಹೆಂಡತಿಯಾಗಿ, ತಾಯಿಯಾಗಿ ಕೊನೆಗೆ ವ್ಯಕ್ತಿಯಾಗಿಯೂ ಕೂಡಾ ದ್ರೌಪದಿಯು ಸದಾ ದುಃಖಿಯಾಗಿಯೇ ಉಳಿದಳು. ಸ್ವಯಂವರ ಮಂಟಪದಲ್ಲಿ ಅಪಮಾನ, ಪರಂಪರೆಗಳು ಮಹಾಪ್ರಸ್ಥಾನದಲ್ಲಿ ಕುಸಿದು ಬೀಳುವಲ್ಲಿವರೆಗೂ ಅವಳನ್ನು ಎಡೆ ಬಿಡದೆ ಹಿಂಬಾಲಿಸುವು, ಹಿಂಸಿಸಿದವು. ಮೊದಲಿನಿಂದ ಕೊನೆಯವರೆಗೂ ಅವಳಿಗೆ ಯಾರೊಡನೆಯೂ ತನ್ನ ನೋವನ್ನು ಹಂಚಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಅವಳ ವ್ಯಕ್ತಿತ್ವದ ಮುಖಾಮುಖಿ ಯಾರೊಂದಿಗೇ ಇರಲಿ, ಎಂಥ ಉತ್ಕಟ ಸ್ವರೂಪದ್ದೇ ಇರಲಿ, ಒಂದು ಪಾರದರ್ಶಕ ಪರದೆಯ ಆಚೀಚೆಯೇ ನಡೆಯುತ್ತಿದ್ದುದು ಅವಳ ಬದುಕಿನ ದುರಂತವಾಗಿದೆ. ಅವಳು ಪೋಷಿಸಿಕೊಳ್ಳುವ ಸಂಬಂಧಗಳೂ ಕ್ಷಣಿಕವಾಗಿದ್ದರೂ ಅವುಗಳು ಮುರಿದು ಬೀಳುವ ಭಯದ ನೆರಳಿನಲ್ಲಿಯೇ ಅವಳು ಬದುಕುತ್ತಿದ್ದಳು. ಉಪಪಾಂಡವರು ಕೊಲೆಯಾದ ಸಂದರ್ಭದಲ್ಲಿ 'ಪರ್ವ'ದ ದ್ರೌಪದಿಗೆ ಈ ಸತ್ಯದ ಸಾಕ್ಷಾತ್ಕಾರವು ತನ್ನ ಬದುಕಿನ ನಿಷ್ಫಲತೆಯ ರೂಪದಲ್ಲಿ ಆಗುತ್ತದೆ. ಈ ಸಂದರ್ಭದಲ್ಲಿ ಕೃಷ್ಣನನ್ನು ಉದ್ದೇಶಿಸಿ ದ್ರೌಪದಿ ಹೇಳುವ ಮಾತುಗಳು ಅವಳ ಅಂತರಂಗವನ್ನು ತೆರೆದಿಡುತ್ತದೆ.

"ಕೃಷ್ಣ, ನಿನಗೂ ತಿಳಿಯುತ್ತಿಲ್ಲ. ಅಭಿಮನ್ಯು ಸತ್ತಾಗ ಅರ್ಜುನ ಬಂದು ಸುಭದ್ರೆಯನ್ನು ತಬ್ಬಿಕೊಂಡ ಬಿಕ್ಕಿ ಬಿಕ್ಕಿ ಕಣ್ಣೀರಿನಿಂದ ನೆನೆಸಿದುದನ್ನು ನೀನು ನೋಡಲಿಲ್ಲವೇ? ಘಟೋತ್ಕಜ ಸತ್ತಾಗ ಭೀಮ ಹೆಣವನ್ನು ಹೊತ್ತು ತಂದು ಕಣ್ಣೀರಿನಿಂದಲೇ ರಕ್ತದ ಕಲೆಯನ್ನೆಲ್ಲಾ ತೊಳೆದುದನ್ನು ನೀನು ನೋಡಲಿಲ್ಲಿವೇ? ಈ ನನ್ನ ಐವರು ಮಕ್ಕಳು ಸತ್ತಾಗ ನಾನೊಬ್ಬಳೇ ಕಣ್ಣೀರು ಸುರಿಸಿ ಮುಗಿಸಿದೆ. ಸುತ್ತ ಕೂತಿರುವ ಐವರು ಅಪ್ಪಂದಿರಲ್ಲಿ ಯಾರೂ ಮೇಲೆ ಬಿದ್ದು ಹೊರಳಿ ಅಳಲಿಲ್ಲ. ಅರ್ಜುನ ಸುಭದ್ರೆಯನ್ನು ತಬ್ಬಿ ಕೂಂಡು ಗೋಳಾಡಿದಂತೆ ಯಾರು ನನ್ನನ್ನು ತಬ್ಬಿಕೊಳ್ಳಲಿಲ್ಲ. ಎಲ್ಲರೂ ಸಮಾನ ದೂರದಲ್ಲಿ ಕುಳಿತ್ತಿದ್ದಾರೆ. ಪ್ರೇಕ್ಷಕ ಭಾವದಿಂದ ಹೀನ ಅಶ್ವತ್ಥಾಮ ನನಗೆ ಪುತ್ರಶೋಕವನ್ನು ಕೊಟ್ಟ. ದೊಡ್ಡ ಸತ್ಯವನ್ನು ತೋರಿಸಿದ. ಈ ನನ್ನ ಮಕ್ಕಳಿಗೆ ಅಗ್ನಿ ಸಂಸ್ಕಾರ ಮಾಡಬೇಕಾದವಳು ನಾನೇ"(*4)

---

(*3 ಎಸ್. ಎಲ್. ಭೈರಪ್ಪ 'ಪರ್ವ' ಪು.ಸ.95-96)
(*4 ಎಸ್. ಎಲ್. ಭೈರಪ್ಪ, ಪುಟ ಸಂಖ್ಯೆ 573)

ದ್ರೌಪದಿಯು ಬದುಕಿನ ಉದ್ದಕ್ಕೂ ಒಂಟಿಯಾಗಿಯೇ ಉಳಿದಳು. ಅವಳ ಸೂಕ್ಷ್ಮ ಸಂವೇದನಾತ್ಮಕ ಕಣಗಳಲ್ಲಿ ಸಂತಾಪದ ತೀವ್ರತೆಯಲ್ಲಿ ಇರಿಯುವ ನೋವಿನಲ್ಲಿ ಅವಳಿಗೆ ಸಮಾಧಾನ ಮಾಡುವರು ಯಾರೂ ಇಲ್ಲ. ಅವಳ ವ್ಯಕ್ತಿತ್ವ ಎಲ್ಲರಿಗಿಂತಲೂ ದೂರವಾಗಿ ಉಳಿಯುವುದಕ್ಕೂ ಅದರ ಪ್ರಖರತೆಯೂ ಕಾರಣವೆನ್ನಬೇಕಾಗುತ್ತದೆ. ಅದಕ್ಕಿಂತ ಹೆಚ್ಚಾಗಿ ಅವಳ ಅಂತರಂಗದ ಒಳಬಾಗಿಲು ಎಲ್ಲರ ಪಾಲಿಗೂ ಮುಚ್ಚಿಯೇ ಉಳಿದು ಬಿಟ್ಟುದು ಕೂಡ ಗಮನಾರ್ಹ.

ಗಾಂಧಾರಿಗೆ ತನ್ನವರೆಲ್ಲರ ಮೇಲಿನ ತಿರಸ್ಕಾರವು ಅವಳಿಗೆ ಕೃತಕ ಅಂಧತ್ವವನ್ನು ತಂದುಕೊಟ್ಟಿತು. ಕುರುಡು ಗಂಡನಿಗೆ ಕಣ್ಣಾಗಿ ಅವನ ದಿಕ್ಸೂಚಿಯಾಗ ಬಹುದಾಗಿದ್ದಂಥ ಅವಕಾಶವನ್ನು ಕೈಯಾರೆ ಕಳೆದು ಕೊಂಡ ಅವಳ ಕ್ರಿಯೆಗೆ ಸಮರ್ಥನೆಯು ಸಿಗುವುದು ಕಷ್ಟವಾಗುತ್ತದೆ. ದ್ರೌಪದಿಯ ಒಳಗೂ ಕೂಡ ಇಂಥದೇ ಉರಿಯುವ ತಿರಸ್ಕಾರ ತೀವ್ರವಾದ ಜೀಗುಪ್ಸೆಗಳೇ ತುಂಬಿದುದರಿಂದಲೇ ಅವಳು ಯಾರಿಗೂ ಬೇಡವಳಾದಳೇನೋ? ಎನ್ನುವ ಸಂದೇಹವೂ ಬರುತ್ತದೆ. ಪುರುಷನ ಅಹಂಕಾರಕ್ಕೆ ಸ್ವಭಾವ ಸಹಜವಾದ ಸ್ವಾಮಿತ್ವಕ್ಕೆ ಬೇಕಾಗಿರುವುದು ಸಹನಶೀಲಳಾದ, ಶರಣಾಗತಳಾದ ಸ್ತ್ರೀಯ ಸಾಹಚರ್ಯವೇ ಹೊರತಾಗಿ ತನಗೆ ಸರಿದೊರೆಯಾಗಿ ನಿಲ್ಲಬಲ್ಲ ತನ್ನ ನಿಲುವನ್ನು ದಿಟ್ಟವಾಗಿ ಪ್ರಶ್ನಿಸಬಲ್ಲ ಭೌದ್ಧಿಕ ಸಂಗಾತಿಯಲ್ಲ ಎನ್ನುವುದನ್ನು ಗಮನಿಸಬೇಕಾಗುತ್ತದೆ. ದ್ರೌಪದಿಯ ಆಧುನಿಕ ಪ್ರಕಾರಗಳಲ್ಲಿಯೂ ಪ್ರಾಚೀನ ಸತ್ವದವಳಾಗೀಯೇ ಕಂಡು ಬರುತ್ತಾಳೆ.

'ಪರ್ವ'ದಲ್ಲಿ ಭೈರಪ್ಪವನರು ಮೂಲ ಮಹಾಭಾರತದ ವಸ್ತುವನ್ನು ತಮ್ಮ ಕಲ್ಪನೆಯ ತುಡಿತಕ್ಕೆ ತೂಗಿಕೊಂಡಿದ್ದಾರೆ. ಭೈರಪ್ಪನವರು ವೈಯಕ್ತಿಕವಾಗಿ ಮೂಡಿಸಿಕೊಂಡಿರುವ ಆಶಯಗಳಿಗೂ ಅವು ಕಾದಂಬರಿಯಲ್ಲಿ ವಸ್ತುನಿಷ್ಠವಾಗಿ ಅವಿಷ್ಕಾರವಾಗಿರುವುದಕ್ಕೂ ನಡುವೆ ಮೂಲಭೂತವಾದ ವಿಧಾನದಿಂದ ತುಂಬಲಾರದ ಕಂದರವಿದೆ. ಸಾಹಿತ್ಯದ ಅಭ್ಯಾಸಕ್ಕಾಗಿ ಸಾಂಸ್ಕೃತಿಕ-ಮಾನವಶಾಸ್ತ್ರದಂತ ಅನ್ಯಶಿಸ್ತಿನ ಮೊರೆ ಹೋಗುವುದು ಅಸಹಜವೇನ್ನಲ್ಲ. ಆಧುನಿಕ ಕಾಲದ ಒಂದು ಸಂಪ್ರಾದಾಯಕ್ಕೆ ಪುರಾಣಯುಗವನ್ನು ಜೋಡಿಸುವುದು ಅವರ ಸಾಧನೆಯೇ ಸರಿ. ಪೌರಾಣಿಕ ಘಟನೆಗಳನ್ನು ಸಂಭವನೀಯ ನೆಲೆಯಂದ ನೋಡುವ ಉದ್ದೇಶದಿಂದ ಭೈರಪ್ಪನವರು 'ಪರ್ವ' ವನ್ನು ಬರೆದಿದ್ದಾರೆನ್ನುವುದು ಸ್ಪಷ್ಟವೇ ಇದೆ. ಈ ಪ್ರಕ್ರಿಯೆಯಲ್ಲಿ ಅವರು ದ್ರೌಪದಿಯನ್ನು ವಿವಿಧ ಆಯಾಮಗಳಿಂದ ನೋಡುವ ದೃಷ್ಟಿಯನ್ನು ಅವರ ಕಾದಂಬರಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಎಸ್. ವಿ. ಪ್ರಭಾವತಿಯವರು ಆಧುನಿಕ ಕಾಲದಲ್ಲಿ ದ್ರೌಪದಿಯ ಅಂತರಂಗವನ್ನು ತೆರದು ನೋಡುವ ದೃಷ್ಟಿಯನ್ನು ತಮ್ಮ ಕಾದಂಬರಿಯಾದ ದ್ರೌಪದಿಯಲ್ಲಿ ಯತ್ನಿಸಿದ್ದಾರೆ. 'ದ್ರೌಪದಿ' ಆಧುನಿಕ ಯುಗದ ಸ್ವತಂತ್ರ

ಯೋಚನೆಗಳುಳ್ಳ ಸ್ವೇಚ್ಛಾವರ್ತನೆಯುಳ್ಳ ಸ್ವೋಪಜ್ಞ ಸ್ತ್ರೀಯಾಗಿದ್ದಾಳೆ. ಅವಳು ನಡೆ ನುಡಿಗಳು ಎಷ್ಟು ಸೂಕ್ಷ್ಮವಾಗಿ ಕೋಮಲವಾಗಿವೆಯೋ ಅಷ್ಟೇ ಸ್ಪಷ್ಟವಾಗಿ ಒರಟಾಗಿ ಕೂಡ ಇವೆ. ಭಾವನೆಗಳಿಂದ ಕುದಿಯುವ ಜ್ವಾಲಮುಖಿಯೊಂದನ್ನು ಇಲ್ಲಿ ದರ್ಶಿಸುತ್ತೇವೆ (*5). ದ್ರೌಪದಿಯು ತನ್ನ ಬದುಕಿನೂದ್ದಕ್ಕೂ ಹೋರಾಟ ಮತ್ತು ಸಂಘರ್ಷಗಳಿಂದ ತುಂಬಿರುತ್ತದೆ. ಇದಕ್ಕೆಲ್ಲಾ ಕಾರಣನಾದ ಕುರುವಂಶದ ಹಿರಿಯನಾದ ಭೀಷ್ಮನನ್ನೇ ವಿರೋಧಿಸುತ್ತಾಳೆ. ದ್ವೇಷಿಸುತ್ತಾಳೆ. ತನ್ನೆಲ್ಲಾ ಕಷ್ಟಗಳಿಗೆ ಭೀಷ್ಮನನ್ನು ಸಮರ್ಥಿಸುತ್ತಾಳೆ. ಇನ್ನೊಂದು ಕಡೆ ಸ್ವಯಂವರದಲ್ಲಿ ಅವಳಿಗೆ ಬೇಕಾಗಿದ್ದು ಅರ್ಜುನ ಮಾತ್ರ. ನಾನು ಪ್ರೀತಿಸುವುದು ಅರ್ಜುನನ್ನೇ ಎಂದು ನಂಬಿದ ದ್ರೌಪದಿ ಕೊನೆಗೆ ಐವರು ಗಂಡಂದಿರಿಗೆ ಒಬ್ಬಳೆ ಹೆಂಡತಿಯಾಗಿ ಬರುವ ಪ್ರಸಂಗ ಒದಗಿ ಬರುತ್ತದೆ.

ಇಡೀ ಮಹಾಭಾರತದಲ್ಲಿ ಮೊದಲಿನಿಂದ ಕೊನೆಯವರೆಗೂ ದ್ರೌಪದಿ ಹಠದಿಂದ ಹೋರಟವನ್ನು ನಡೆಸಿ, ಗೆಲುವಿಗಾಗಿ ಕಾಯುತ್ತಾಳೆ. ಗೆಲುವಿನಲ್ಲಿಯೂ ನೋವು ದುಃಖ ಎಲ್ಲವನ್ನು ಸಹಿಸಿಕೊಳ್ಳುತ್ತಾಳೆ. ದಾಂಪತ್ಯದಲ್ಲಿಯೂ ಯಾವ ಸುಖವನ್ನು ಅನುಭವಿಸದೇ ತನ್ನ ಮಡಿಲಲ್ಲಿ ಐವರು ಮಕ್ಕಳು ಜನಿಸುತ್ತಾರೆ. ಆದರೆ ಯಾವುದೇ ಪ್ರೀತಿ ತೋರಿಸದೆ ಇರುವ ನನ್ನ ಗಂಡಂದಿರೆ ಮಕ್ಕಳ ಬಗ್ಗೆ ನಿರ್ಲಕ್ಷ ತೋರುತ್ತಾರೆ. ಘಟೋತ್ಕಚನ ಬಗ್ಗೆ ಭೀಮ, ಅಭಿಮನ್ಯುವಿನ ಬಗ್ಗೆ ಅರ್ಜುನ ತೋರುವ ಕಾಳಜಿ, ಹಿಡಿಂಬೆ, ಸುಭದ್ರೆಯರಿಗೆ ಕೊಡುವ ಪ್ರಾಶಸ್ತ್ಯಗಳ ಬಗ್ಗೆ ದ್ರೌಪದಿ ಸಹಜವಾಗಿ ಕೋಪ ದ್ವೇಷಗಳನ್ನು ತಾಳುತ್ತಾಳೆ. ತನ್ನ ಗಂಡಂದಿರು ಪರಸ್ತ್ರೀಗೆ ಕೊಡುವ ಮಾರ್ಯಾದೆಯನ್ನು ನೋಡಿ ತಾನು ದುಃಖಿತಳಾಗುತ್ತಾಳೆ.

ಎಸ್.ವಿ.ಪ್ರಭಾವತಿ ತಮ್ಮ ಕಾದಂಬರಿಯಲ್ಲಿ ದ್ರೌಪದಿಯ ಅಂತರಾಳವನ್ನು, ಅವಳ ನೋವಿಗಳಿಗೆ ಸ್ಪಂದಿಸಿ ಹೀಗೆ ಹೇಳುತ್ತಾರೆ " ಪಾಂಡವರು ಅತ್ಯಂತ ಸಂತೋಷದಿಂದ ಇದ್ದ ಕಾಲದಲ್ಲಿಯೂ ವೈಭವದಿಂದ ನಡೆಯುತ್ತಿದ್ದಾಗ, ದ್ರೌಪದಿಯ ಮಕ್ಕಳು ಅನುಪಸ್ಥಿತರಿದ್ದರೆಂಬುದು ಹೆತ್ತ ಕರುಳನ್ನು ಚುಚ್ಚತ್ತದೆ. ವನವಾಸದ ಕಾಲದಲ್ಲಿ ದೈಹಿಕ ಸುಖಗಳಿಂದ ದೂರಾಗಿದ್ದ ಆಕೆಗೆ ಮಕ್ಕಳ ಕುರಿತ ಚಿಂತೆಯು ಕಾಡುತ್ತದೆ. ಪಾಂಡವರೆಂದೂ ಈ ಮಕ್ಕಳ ಕುರಿತು ಕೊರಗಲಿಲ್ಲ. ಹೀಗಾಗಿ ದ್ರೌಪದಿ ತನ್ನ ಪತಿಗಳು ಸಾಮೂಹಿಕವಾಗಿ ತನ್ನನ್ನು ಬಳಸಿಕೊಂಡು ಸಂತೋಷ ಪಟ್ಟರು. ವೇಶ್ಯೆಯಂತೆ ನಡೆಸಿಕೊಂಡರು. ತಾವು ಹುಟ್ಟಿಸಿದ ಮಕ್ಕಳ ಬಗ್ಗೆ ತಮ್ಮ ಹೊಣೆಗಾರಿಕೆಯನ್ನು ಅರಿಯಲಿಲ್ಲ ಎಂದು ಕೊರಗುತ್ತಾಳೆ. (*6.). ತನ್ನ ಮಕ್ಕಳ ಬಗ್ಗೆ ಜವಾಬ್ದಾರಿಯನ್ನ ತೆಗೆದು ಕೊಂಡ ದ್ರೌಪದಿ ದುಃಖದಿಂದ ಮಕ್ಕಳ ಹೆಣಗಳನ್ನು ಸುಡುತ್ತಾಳೆ. ತನ್ನ ಬದುಕೇ ಸುಡುತ್ತಿರುವಾಗಲೂ ಅವಳ ರೋಷ, ಹಠ ಮಾತ್ರ ಕೊನೆಯಾಗಲಿಲ್ಲ. ದ್ರೌಪದಿಗೆ ಎಂತಹ ಅಸಹಾಯಕ ಸ್ಥಿತಿ ಒದಗಿದರೂ ಅವಳು ಮಾನಸಿಕವಾಗಿ ಕುಗ್ಗಲಿಲ್ಲ. ಅದರ ಬದಲಾಗಿ ಪ್ರತಿಭಟಿಸುವ ಮನೋಭಾವವನ್ನು ಕಾಣುತ್ತೇವೆ.

---

(*5 *6 ಎಸ್. ವಿ. ಪ್ರಭಾವತಿ ದ್ರೌಪದಿ ಪು. ಸ.167, 168)

ಬದುಕಿನುದ್ದಕ್ಕೂ ಸ್ವಂತಿಕೆಗಾಗಿ ಅಸ್ತಿತ್ವಕ್ಕಾಗಿ ಅವಳು ನಡೆಸಿದ ಹೋರಾಟಗಳು ಅವಳ ಎತ್ತರವನ್ನು ಹೆಚ್ಚಿಸುತ್ತದೆ. ಒಬ್ಬ ತಾಯಿಯಾಗಿ ದ್ರೌಪದಿಯ ಸಂಕಟಗಳು ಅಭಿವ್ಯಕ್ತವಾಗಿವೆಯಾದರೂ ಇತರ ಸ್ತರಗಳಲ್ಲಿ ಸ್ತ್ರೀಯಾಗಿ ಅವಳ ಅಸಮಾಧಾನಗಳು ಸಾಕಷ್ಟು ವ್ಯಕ್ತವಾಗಿವೆ. ಅವಳು ಇನ್ನೊಂದು ರೀತಿಯಲ್ಲಿ ತನ್ನ ಕಷ್ಟಕ್ಕೆ ತಾನೆ ಗುರಿಯಾಗುತ್ತಾಳೆ. ಅದು ಹೇಗೆಂದರೆ ಮದುವೆಯ ಸಂದರ್ಭದಲ್ಲಿ ತನ್ನ ಒಪ್ಪಿಗೆಯನ್ನು ತಾನೇ ಹೇಳಬೇಕಾಯಿತೇ ಹೊರತು ಪುರುಷರ್‍ಯಾರು ಅವಳ ಅಭಿಪ್ರಾಯ ಕೇಳಲಿಲ್ಲ. ಇಲ್ಲಿ ಪಾಂಡವರ ತಾಯಿಗೆ ಸಿಕ್ಕ ಗೌರವ ಮುಖ್ಯವಾಯಿತೇ ಹೊರತು ತನ್ನ ಹೆಂಡತಿಯ ಮನಸ್ಸಿನ ಅಂತರಾಳವನ್ನು ಯಾರು ಅರಿಯಲಿಲ್ಲ. ತನ್ನ ಅಸಹಾಯಕ ಸ್ಥಿತಿಯನ್ನು ಕಂಡು ಕೊರಗುತ್ತಾಳೆ. ದ್ರೌಪದಿ ಸ್ತ್ರೀ ಸಹಜವಾದ ಪ್ರೀತಿ, ಅನುಕಂಪ, ಸಹಿಷ್ಣುತೆ ಉದಾರತೆಗಳ ಜೊತೆಗೆ ಈರ್ಷೆ. ದ್ವೇಷ. ಸಣ್ಣತನ. ಸ್ವಾರ್ಥ ಇತ್ಯಾದಿ ಗುಣಗಳನ್ನು ಹೊಂದಿದ್ದಾಳೆ. ಎಲ್ಲಾಕ್ಕಿಂತ ಹೆಚ್ಚಾಗಿ ದೇವತ್ವ, ರಾಜ ಮನೆತನದ ಸಂಸ್ಕೃತಿ ಇತ್ಯಾದಿ ಯಾವುದೇ ಸೋಗಲಾಡಿತನಗಳಿಲ್ಲದ ಜನಪದ ಹೆಣ್ಣೊಬ್ಬಳು ತೋರಬಹುದಾದ ಕೋಪ ತತ್ಪರಿಣಾಮವಾದ ಉದ್ಧಟ ವರ್ತನೆಗಳನ್ನು ಅವಳು ತೋರುತ್ತಾಳೆ.

ತನ್ನ ಮಾನಪಹರಣದ ಸಂದರ್ಭದಲ್ಲಿ ದುಶ್ಯಾಸನನನ್ನು ಒದ್ದು ಕೆಡುಹುವ ಸ್ವಯಂರಕ್ಷಣೆಯ ಕಿಚ್ಚು ತೋರುತ್ತಾಳೆ. ಸಭಾಮಧ್ಯದಲ್ಲಿ ಮತ್ತು ಸ್ಮಶಾನದಲ್ಲಿ ಗಂಡಂದಿರನ್ನು ಧಿಕ್ಕರಿಸುವ ಧೈರ್ಯ ತೋರುತ್ತಾಳೆ. ಈ ಉಜ್ವಲ ಉರಿಯ ದ್ರೌಪದಿಯನ್ನು ಸತ್ಯಾಕಾಮರ ದ್ರೌಪದಿಯೊಂದಿಗೆ ತುಲನೆ ಮಾಡಿದರೆ, ಅಂತರ ಢಾಳಾಗಿ ಕಾಣುತ್ತೇವೆ. ಸತ್ಯಕಾಮರ ಕಾದಂಬರಿಯಲ್ಲಿ ದ್ರೌಪದಿಯ ಉರಿ ನಂದಿ ಹೋದದುಕ್ಕಾಗಿ ಅನುಕಂಪ ತೋರಿದರೆ. ಪ್ರಭಾವತಿಯ ಕಾದಂಬರಿಯಲ್ಲಿ ಪ್ರಜ್ವಲಗೊಳಿಸಿ ಅವಳ ನಿಜವಾದ ಶಕ್ತಿ ಶೌರ್ಯಗಳನ್ನು ಪ್ರದರ್ಶಿಸಿದ್ದಾರೆ. ಇಲ್ಲೆಲ್ಲ ಹೆಣ್ಣಿನ ನಿಜವಾದ ಅಂತರಂಗದ ದರ್ಶನವಾಗುತ್ತದೆ. ನೊಂದು ಬೆಂದು ಹೋದ ಆಕೆಗೆ ನಕುಲ ಸಹದೇವರ ಪ್ರೀತಿಯ ಆಸರೆ ದೊರೆತಾಗ ಅದನ್ನು ಆತುಕೊಳ್ಳುತ್ತಾಳೆ. ಯುದ್ಧದ ನಂತರ ತನ್ನ ಐವರು ಮಕ್ಕಳ ಭವಿಷ್ಯದ ಬಗ್ಗೆ ಕನಸು ಕಟ್ಟಿ ನಿರಾಶಳಾಗಿದ್ದ ಆಕೆ ಮತ್ತೆ ನಕುಲ ಸಹದೇವರ ಮಕ್ಕಳ ಬಗ್ಗೆ ಕನಸು ಕಟ್ಟುತ್ತಾಳೆ. ತಾಯ್ತನದ ಬಯಕೆ ಮರುಕಳಿಸುತ್ತದೆ. ಸಾಮಾನ್ಯ ಹೆಣ್ಣಿಗೆ ಇರಬೇಕಾದ ಸಹಜವಾದ ಭ್ರಮೆಗಳು ಆಕೆಯಲ್ಲಿವೆ. ಇಲ್ಲಿನ ಗಂಡುಗಳು ಸಣ್ಣತನಗಳನ್ನು ತೋರುವ ಸಾಮಾನ್ಯ ಗಂಡುಗಳೇ ಆಗಿದ್ದಾರೆ. ಇವರುಗಳ ನಡುವೆ ಹಲವು ವಿಧಧ ಜಿದ್ದುಗಳು ಕಾಣುತ್ತವೆ. ಹೆಂಡತಿಯ ವಿಚಾರಕ್ಕೂ ಇವರಲ್ಲಿ ಮೇಲಾಟವಿದೆ. ಧರ್ಮರಾಯನಲ್ಲಿ ಹೆಚ್ಚಿನ ಬದಲಾವಣೆ ಇಲ್ಲ. ಕೃಷ್ಣನ ಪಾತ್ರ ಎದ್ದು ಕಾಣುವುದಿಲ್ಲವಾದರೂ ದ್ರೌಪದಿಯ ಮೇಲೆ ಆತನ ಪ್ರಭಾವ ಬಹಳವಾಗಿದೆ. ಹೀಗೆ ಮಹಾಭಾರತದಲ್ಲಿ ಮಹಾಮಾನವರನ್ನು ನಮ್ಮ ನೆಲೆಗೆ ತಂದು ನಿಲ್ಲಿಸುವಲ್ಲಿ ನಮ್ಮ ನಡುವೆ ಮಹಾಭಾರತದ ಜಗತ್ತನ್ನು ಇರಿಸುವಲ್ಲಿ ಲೇಖಕಿ

ಯಶಸ್ವಿಯಾಗುತ್ತಾರೆ. ಹಾಗೂ ಪವಾಡಸದೃಶವಾದ ಅತಿಮಾನುಷವಾದ ಘಟನೆಗಳು ಇಲ್ಲಿ ಮಾನವ ಸಹಜ ಸರಳೀಕೃತವಾಗಿ ವೈಜ್ಞಾನಿಕ ದೃಷ್ಟಿಯನ್ನೊಳಗೊಂಡಿದೆ.

ಕಾದಂಬರಿಯ ಬಹು ಮುಖ್ಯ ಲಕ್ಷಣವೆಂದರೆ ಅದರ ಧ್ವನಿಪೂರ್ಣತೆ. ಇದನ್ನು ಸಾಧಿಸುವಲ್ಲಿ ಅದರ ಸಂಕ್ಷಿಪ್ತತೆ ಮುಖ್ಯಸಾಧನವಾಗಿದೆ. ಭಾರತ ಕಥೆ ಇಲ್ಲಿ ಸಂಕ್ಷೇಪ ರೂಪತಾಳಿದೆ. ದ್ರೌಪದಿ ಕೇಂದ್ರಿತ ಕಥೆಗೆ ಅಗತ್ಯವಾದ ಸನ್ನಿವೇಶಗಳನ್ನು ಆಯ್ದುಕೊಂಡು ಅನಗತ್ಯವೆನಿಸಿದುವುಗಳನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೊಗೆಯಲಾಗಿದೆ. ಉದಾಹರಣೆಗೆ ಭಗವದ್ಗೀತೆಯ ಉಪದೇಶ, ಚಿತ್ರಾಂಗದೆಯ ಪ್ರಸಂಗ ಗದಾಯುದ್ಧ ಕಾವ್ಯ –ದಲ್ಲಿ ಒಂದೇ ವಾಕ್ಯ ಇದ್ದೂ ಇಲ್ಲದಂತಿವೆ. ಸತ್ಯಕಾಮರ ಕಾದಂಬರಿಯಾದ "ಬೆಂಕಿಯ ಮಗಳು"ಎಂಬುದಲ್ಲಿ ದ್ರೌಪದಿಯ ವನವಾಸ ಕಾಲದ ಕಾರ್ಪಣ್ಯಗಳನ್ನು ಹೇಳುವಲ್ಲಿ, ಅವಳ ಮಾನಪರಣಕ್ಕೆ ಯತ್ನಿಸಿದ ಗೋಳು, ಹೊಯ್ದುಕೊಂಡ ಜಟಾಸುರನ ವಂಚಕ ಕೃತ್ಯದ ವಿವರಣೆ ಸೇರಿದ್ದರೆ ಇನ್ನಷ್ಟು ಪರಿಣಾಮಕಾರಿಯಾಗುತ್ತಿತೇನಿಸುತ್ತದೆ.

ಪಾತ್ರಗಳಲ್ಲಿ ದ್ರೌಪದಿ ಸಹಜವಾಗಿಯೇ ಇಡೀ ಕಾದಂಬರಿಯನ್ನು ವ್ಯಾಪಿಸಿರುವ ಮುಖ್ಯಳು. ತಂದೆಯ ಅವಮಾನದ ಬೆಂಕಿಯಿಂದ. ಅನ್ವರ್ಥನಾಮ ಪಡೆದವಳು. ಆರಂಭದಲ್ಲಿ ತುಂಟಾಟದ ಮುಗ್ಧ ಕನ್ಯೆ, ಹುಡುಗಾಟಿಕೆಯ ಸ್ವಾತಂತ್ರ್ಯವನ್ನು ಬಯಸುವಾಕೆ ಕುತೂಹಲದ ಕಣ್ಣಿನವಳು, ಶೀಘ್ರಕೋಪಿ, ವೀರಾಗ್ರಣಿ ಎನಿಸಿಕೊಂಡವಳು. ಯೌವನದಲ್ಲಿ ಎಲ್ಲ ಕೊಡಗೂಸುಗಳಂತೆ ಕನಸು ಕಂಡವಳು. ಸ್ವಯಂವರ ನಿಶ್ಚಯದ ಸ್ವಾತಂತ್ರ್ಯ ಅವಳಿಗೆ ದೊರೆಯಿತು. ಎಲ್ಲರ ಹೆಣ್ಣುಗಳಂತೆ ಅವಳಿಗೂ ತನ್ನ ಗಂಡನಾಗುವವನಲ್ಲಿ ಕುಲ, ಶೌರ್ಯ ಸಂಪತ್ತು ರೂಪ, ಸುಖಗಳ ಬಯಕೆ ಇದೆ. ಆದ್ದರಿಂದಲೇ ಸ್ವಯಂವರದ ಪರಿಣಾಮ ಅವಳಲ್ಲಿ ನಿರಾಶೆ ಮೂಡಿಸುತ್ತದೆ. ಹೀಗಿರುವ ದ್ರೌಪದಿಗೆ ಒಂದು ಕಡೆ ಸಂತಸವನ್ನು ತಂದರೆ, ಮತ್ತೊಂದು ಕಡೆ ಅವಳಿಗೆ ಅಸೂಯೆ, ದ್ವೇಷ ರೋಷಗಳು ಹುಟ್ಟುತ್ತವೆ.(*7).

ಸಾಮಾನ್ಯ ಹೆಣ್ಣಿನಂತೆ ಕನಸುಗಳನ್ನು ಹೊತ್ತ ದ್ರೌಪದಿ, ಅ ಕನಸುಗಳೆಲ್ಲಾ ನನಸಾಗಿದ್ದರೂ ಅದರಲ್ಲೇ ಕಷ್ಟಗಳು ತುಂಬಿರುತ್ತವೆ. ಎಂದು ಅಂದು ಕೊಂಡಿರಿರಲ್ಲಿಲ್ಲ. ದುಃಖ ಅಸಹಾಯತೆಗಳಿಂದ ಕುದಿಯುತ್ತಾಳೆ. ಧರ್ಮರಾಜ ಜೂಜನಲ್ಲಿ ಇವಳನ್ನು ಇಟ್ಟು ಸೋಲುತ್ತಾನೆ. ಅರ್ಜುನ ಹಲವು ಹೆಣ್ಣುಗಳನ್ನು ಕಟ್ಟಿಕೊಂಡಾಗ ಇವಳಿಗೆ ಅವನ ಮೇಲೆ ದ್ವೇಷ ತುಂಬುತ್ತದೆ. ಪರ ಪುರುಷರ ಕಾಮಕ ಕಣ್ಣು ಇವಳ ಮೇಲೆ ಬಿಳುತ್ತದೆ. ಇದರಿಂದ ಚಿಂತಿತಳಾಗುತ್ತಾಳೆ. ತಂದೆ, ಅಣ್ಣ, ಮಕ್ಕಳು ಭೀಕರವಾಗಿ ಕೊಲೆಯಾದಾಗ ಅತಿಯಾಗಿ ದುಃಖಿಸುತ್ತಾಳೆ. ಈ ಎಲ್ಲದರ ದುಃಖದಿಂದ ಕಡೆಗೊಮ್ಮೆ ಇತರರನ್ನು ಪ್ರಚೋದಿಸಿ ಸೇಡು ತೀರಿಸಿಕೊಳ್ಳುವುದಕ್ಕೆ

(*7 ಸತ್ಯಕಾಮ.ಬೆಂಕಿಯ ಮಗಳು. ಪು. ಸ.63)

ಕಾಯುತ್ತಾಳೆ. ಸತ್ಯ ಕಾಮರು ತನ್ನ ಕಾದಂಬರಿಯಲ್ಲಿ ಶಕ್ತಿ ಹೀನಳಾದ ದ್ರೌಪದಿಗೆ ಶಕ್ತಿಯನ್ನು ತುಂಬಿ, ಅವಳ ಸೇಡನ್ನು ತೀರಿಸಿ ಕೊಳ್ಳಲು ಅನುವು ಮಾಡುತ್ತಾರೆ.

ದ್ರೌಪದಿ ತನ್ನ ಸೇಡಿನ ಜೋತೆಗೆ ಅವಳ ಪ್ರೀತಿ, ಗೌರವ, ಸಹನೆ, ತಾಳ್ಮೆ ಎಲ್ಲವನ್ನು ಅನುಸರಿಸುತ್ತಾಳೆ. ಇದನ್ನು ಕೆಲವೊಂದು ಉದಾಹರಣೆ ಮೂಲಕ ಹೇಳುವುದಾದರೆ. ಕೃಷ್ಣನ ಬಗ್ಗೆ ಆಕೆಗೆ ಪ್ರೀತಿ ಭಕ್ತಿಯಿದೆ, ಕುಂತಿಯ ಬಗ್ಗೆ ಗೌರವವಿದೆ. ಧರ್ಮರಾಯನ ಬಗ್ಗೆ ಕನಿಕರವಿದೆ, ಭೀಷ್ಮನ ಬಗ್ಗೆ ಗೌರವ, ಉಪೇಕ್ಷೆ ಇದೆ. ಕರ್ಣನ ಮೇಲೆ ಆಸೆ ಇದೆ. ಹೀಗೆ ಕಾದಂಬರಿಯ ದ್ರೌಪದಿ ಮಹಾ ಭಾರತದಲ್ಲಿನಂತೆ ಅತೀ ಮಾನವಳಾದ ಅಗ್ನಿ ಪುತ್ರಯಾಗಿ, ಪತಿವ್ರತಾ ಶಿರೋಮಣಿಯಾಗಿ, ಕೃಷ್ಣನ ಪರಮ ಭಕ್ತೆಯಾಗಿ ಲೋಕ ಪೂಜ್ಯಳಾಗಿ ತೋರದೆ ಸಾಮನ್ಯ ಹೆಣ್ಣಾಗಿ ಮೂಡಿ ಬಂದಿದ್ದಾಳೆ. ಹೆಣ್ಣಿನ ಸಹಜ ಗುಣಗಳಾದ ಗರ್ವ, ಗೆಲುವು, ದೈನ್ಯ, ಸೋಲು,ದುಃಖಗಳನ್ನೆಲ್ಲ ಅನುಭವಿಸುತ್ತಾ ನಮ್ಮ ನಡುವಿನಳೊಬ್ಬಳಾಗಿದ್ದಾಳೆ. ಹೀಗೆ ಅವಳ ಸುತ್ತ ಕೌಟುಂಬಿಕ ಪರಿಸರವೊಂದನ್ನು ಕಾದಂಬರಿ ನಿರ್ಮಿಸಿದ್ದಾರೆ. ನಮಗೆ ಆತ್ಮೀಯಳಾಗುತ್ತಾಳೆ. ಅವಳೊಳಗಿನ ಮೀರದ ಉರಿ ದುಃಖದ ಉರಿ ಎರಡನ್ನೂ ಉಜ್ವಲವಾಗಿಸಿ ತೋರವ ಕಾದಂಬರಿಕಾರರ ಉದ್ದೇಶ ಸಫಲವಾಗಿದೆ.

"ಪಾಂಚಲಿ" ಎಂಬ ಕಾದಂಬರಿಯಲ್ಲಿ ಆದ್ಯ ರಾಮಾಚಾರ್ಯರವರು ಬಹುಪತಿತ್ವ ಪದ್ಧತಿಯನ್ನು ಕುರಿತು ಕಾದಂಬರಿಯಲ್ಲಿ ಚರ್ಚಿಸಲಾಗಿದೆ. ಹಿಂದಿನ ಕಾಲದಲ್ಲಿ ಬಹುಪತಿತ್ವ ಪದ್ಧತಿ ಇತ್ತು ಎಂಬುದಕ್ಕೆ ಕೆಲವು ಉದಾಹರಣೆಗಳು ಬಳಸಿಕೊಂಡಿದ್ದಾರೆ.

ದ್ರೌಪದಿ ಐದು ಜನರನ್ನು ಕೈ ಹಿಡಿಯ ಬೇಕಾಗಿ ಬಂದ ಪ್ರಸಂಗವನ್ನೇ ಆರಿಸಿಕೊಂಡಿದ್ದಾರೆ. ಮೂಲವನ್ನು ಅನುಸರಿಸಿ ಕಾದಂಬರಿ ಕುಂತಿ, ಮಕ್ಕಳು ಬಂದು ಏನನ್ನು ತಂದಿದ್ದೇವೆ. ನೋಡಿರಿ ಅಂದಾಗ ದೊರಕಿದ್ದನ್ನು ಎಂದಿನಂತೆ ಸಮನಾಗಿ ಹಂಚಿಕೊಳ್ಳಿರಿ ಎಂದು ಬಿಡುತ್ತಾಳೆ. ಸುಳ್ಳನ್ನಾಡದ ತಾಯಿಯ ಮಾತನ್ನು ಉಳಿಸಿವುದಕ್ಕಾಗಿ ಐವರೂ ದ್ರೌಪದಿಯನ್ನು ಮದುವೆಯಾಗ ಬೇಕಾಗುತ್ತದೆ.(*8) ಕುಂತಿಯ ಈ ಮಾತನ್ನು ಗಮನಿಸಿದರೆ ಅವಳು ಆಡುವ ಮಾತೆ ಅಸ್ಪಷ್ಟವಾಗಿರುತ್ತದೆ. ಕುಂತಿಗೆ ತನ್ನ ಮಕ್ಕಳು ಸ್ವಯಂವರಕ್ಕೆ ಹೋಗಿದರೆಂದು ತಿಳಿದು ತಪ್ಪಾಗಿ ನುಡಿದಳೆ? ಇಲ್ಲವೆ ಮಕ್ಕಳು ತಾಯಿಯ ಆಜ್ಞೆಯ ಮಾತನ್ನು ಮೀರಬಾರದೆಂದು ದ್ರೌಪದಿಯನ್ನು ಎಲ್ಲರೂ ಸ್ವೀಕರಿಸಿದರೆ? ಯಾಕೆ ಕುಂತಿಯೂ ಒಂದು ಸಲ ಪ್ರತಿಜ್ಞೆಯನ್ನು ಮಾಡಿ ಪಾಂಡುವಿನ ಜೊತೆಯಲ್ಲಿ ಚಿತೆಗೆ ಸತಿಸಹಗಮನ ಮಾಡುತೀನಿ ಎಂದವಳು ಸುಮ್ಮನಾದಳು ಇದು ಯಾರು ಕೇಳಲಿಲ್ಲ ಯಾಕೆ? ಹೀಗೆ ಹಲವು ಪ್ರಶ್ನೆಗಳ ಮೂಲಕ ಆದ್ಯರಾಮಚಾರ್ಯರು ತಮ್ಮ ಕಾದಂಬರಿಯಲ್ಲಿ ಕುಂತಿಯನ್ನು ಪ್ರಶ್ನಿಸುತ್ತಾರೆ

ಕೃಷ್ಣನ ಮಹತ್ವವನ್ನು ಎತ್ತಿ ಹಿಡಿಯುವ ಇನ್ನೊಂದು ಉದ್ದೇಶ ಲೇಖಕರಿಗಿದೆ. ಆದ್ದರಿಂದಲೇ ಸ್ವಯಂವರಕ್ಕೆ ಮೊದಲು ಯಾದವ ಕೃಷ್ಣ ಪಾಚಂಲ ನಗರಕ್ಕೆ ಬಂದಾಗ ದ್ರೌಪದಿಯು ಕೃಷ್ಣನನ್ನು ಸೋದರನಾಗಿ ಸ್ವೀಕರಿಸುತ್ತಾಳೆ. ಕಾದಂಬರಿಯಯ ನಾಯಕಿ ದ್ರೌಪದಿ ಸುಂದರಿ, ಮಹಾಮಹಿಮಳು. ಇಷ್ಟಾಗಿ ಪೂರ್ವ ಜನ್ಮದ ಮಹಾತ್ಮೆಯನ್ನು ಬಿಟ್ಟರೆ ಈ ಜನ್ಮದಲ್ಲಿ ಅವಳಿಗೆ ಸ್ವತಂತ್ರ ವ್ಯಕ್ತಿತ್ವವೇ ಇಲ್ಲ. ಅವಳು ತೋರಿದ ಸ್ವಂತಿಕೆ ಎಂದರೆ ಸೂತನನ್ನು ಮದುವೆಯಾಗುವುದಿಲ್ಲವೆಂದು ಹೇಳುವ ಜಾತೀಯ ಗುಣವೊಂದೇ. ಮತ್ತೇ ಅವಳ ತಂದೆ ಅಣ್ಣ ಕೃಷ್ಣ ಕಡೆಗೆ ಕೈಹಿಡಿಯುವ ಪಾಂಡವರಿಗೆ ಅಧೀನಳು. ಆದ್ದರಿಂದಲೇ ಪತಿವ್ರತೆ. ಅವರಲ್ಲರ ಸೇವೆಯಲ್ಲೇ ಅವಳಿಗೆ ಸಾರ್ಥಕತೆ.

ಸತ್ಯಾಕಾಮರು ಮತ್ತು ಆದ್ಯ ರಾಮಚಾರ್ಯ ಇವರಿಬ್ಬರು ಬರೆದಿರುವ ಕಾದಂಬರಿಗಳಿಲ್ಲಿ ತುಲನೆ ಮಾಡಿದಾಗ ಸತ್ಯಕಾಮರು ಅವರ ಕಾದಂಬರಿಯಲ್ಲಿ ದ್ರೌಪದಿಯನ್ನು ಕೆಂಡದ ಉಂಡೆಯಾಗಿ ಕೋಪಕ್ಕೆ ಗುರಿಯ ಸೇಡನ್ನು ಹೇಗೆ ತೀರಿಸಿ ಕೂಳ್ಳುತ್ತಾಳೆ ಎಂಬುದನ್ನು ಚಿತ್ರಿಸಿದ್ದಾರೆ.ಆದ್ಯ ರಾಮಚಾರ್ಯ ತನ್ನ ಕಾದಂಬರಿಯಲ್ಲಿ ಮೊದಲಿಗೆ ಬಹುಪತಿತ್ವಕ್ಕೆ ಕಾರಣವನ್ನು ಹುಡಿಕಿದ್ದಾರೆ. ದ್ರೌಪದಿಯ ಕಾರಣಕ್ಕೆ ಒಂದು ರೀತಿಯಲ್ಲಿ ಕುಂತಿಯೇ ಕಾರಣಳಾಗುತ್ತಾಳೆ. ಅವಳಲ್ಲಿಯೇ ಪ್ರಶ್ನೆಯನ್ನು ಕೇಳುವರು.

ಒಟ್ಟಾರೆ ದ್ರೌಪದಿ ಪಾಂಚಾಲಿಯಾದದ್ದನ್ನೂ ಪ್ರಶ್ನಿಸಬಾರದೆಂಬುದುದಷ್ಟೆ ಆದ್ಯರ ಆಸೆ. ವಾಸ್ತವದಲ್ಲಿ ಪಾಂಚಲಿ ಎಂಬುದು ದ್ರೌಪದಿಗೆ ತೌರಿನಿಂದ ಬಂದ ಹೆಸರು. ಪಂಚಪತಿಗಳನ್ನುಳ್ಳವಳೆಂದು ಅದು ಸೂಚಿಸುವುದಿಲ್ಲ. ಆಕೆ ಅಗ್ನಿ ಪುತ್ರಿಯಾದದ್ದರಿಂದ ಲೋಕದ ಸಾಮಾನ್ಯ ಹೆಣ್ಣುಗಳಂತಲ್ಲವಾದ್ದರಿಂದ ಅವಳಿಗೆ ಹೆಸರು ಐದು. ಐದಶ್ವಗಳ, ರಥ. ಐವರು ಸಖಿಯರು, ವಾಸಸ್ಥಳಕ್ಕೆ ಐದು ಕಂಬ ಕಿಟಕಿಯಿಂದ ನೋಡಿದಾಗ ಕಾಣುವ ಮರಗಳು ಐದು ಇತ್ಯಾದಿ ಹೇಳಿ ವೈಭವೀಕರಿಸಲಾಗಿದೆ. ಹಾಗೆಯೇ ಪಂಚಪತಿಗಳೂ ಸಹಜವೆಂದು ಸಮರ್ಥಿಸುತ್ತಾರೆ.

ಆದ್ಯ ರಾಮಚಾರ್ಯರು ದ್ರೌಪದಿಯ ಬಾಯಲ್ಲಿಯೇ ತನ್ನ ಅತ್ತೆಯ ಬಗ್ಗೆ ಗೌರವದ ಮಾತುಗಳನ್ನು ಆಡಿಸುತ್ತಾರೆ." ಕಷ್ಟಗಳ ಸಂದರ್ಭದಲ್ಲಿ ದ್ರೌಪದಿ ಸಮೇತರಾದ ಪಾಂಡವರನ್ನು ಪೊರೆಯುವ ಹೆಮ್ಮರ ಆಕೆ ವಾತ್ಸಲ್ಯದ ಮೂರ್ತಿ. ಅನುಭವಗಳಿಂದಲೇ ಪಾಠ ಕಲಿತು ಸೂಸೆ ಮತ್ತು ಮಕ್ಕಳಿಗೆ ಮಾರ್ಗದರ್ಶನ ಮಾಡುವಳು ಆದ್ಯಾಗೂ ಕರ್ಣನ ವಿಚಾರದಲ್ಲಿ ಅವಳ ನಡವಳಿಕೆ ಗೌರವ ತರುವಂಥದಾಗುವುದಿಲ್ಲ."(*9).

ಕೃಷ್ಣ ದ್ರೌಪದಿಗೆ ಅತಿ ಮೆಚ್ಚಿನವ, ನೂರುಜನ ತಾಯಿಯನ್ನು ಒಬ್ಬ ಗಂಡಿನ ಹೃದಯದಲ್ಲಿ ಕೂಡಿ

(*8 ಆದ್ಯ ರಾಮಾಚಾರ್ಯ ಪಾಂಚಾಲಿಪು.ಸ.146)
(*9 ಜಿ. ರಮೇಶ್ ಕನ್ನಡ ಪೌರಾಣಿಕ ಕಾದಂಬರಿ ಪು.ಸ. 64,)

ಸುವ ವಾತ್ಸಲ್ಯ ಮೂರ್ತಿ ದ್ರೌಪದಿಗೆ ಸೋದರನಾಗಿ ಮಾನಹರಣವಾಗುವಾಗ ವಸ್ತ್ರ ನೀಡಿ ಕಾಪಾಡಿದ ಕೃಪಮೂರ್ತಿ ಎಂದು ಸತ್ಯಕಾಮರು ತಮ್ಮ ಕಾದಂಬರಿಯಲ್ಲಿ ಕೃಷ್ಣನನ್ನು ಹೊಗಳಿದ್ದಾರೆ.

ವಸ್ತ್ರಾಪಹರಣದ ಸಂದರ್ಭದಲ್ಲಿ ಅಕ್ಷಯ ವಸ್ತ್ರವನಿತ್ತು ದ್ರೌಪದಿಯ ಮಾನವನ್ನು ಕಾಪಾಡಿದಕ್ಕೆ ಕಾರಣವೊಂದನ್ನು ಜನಪದ ಸಾಹಿತ್ಯದಿಂದ ಸತ್ಯಕಾಮ ಹೆಕ್ಕಿ ಹೇಳಿರುವುದು ಉಲ್ಲೇಖಾರ್ಹವಾಗಿದೆ. ರಾಜಸೂಯಾಗಲ್ಲಿ ಕೃಷ್ಣ ಮಾಡಿದ ಕೆಲಸಗಳನ್ನು ನೆನಪಿಸಿಕೊಳ್ಳುತ್ತಾ ಆತ ಅಡಿಗೆ ಮನೆಯಲ್ಲಿ ತರಕಾರಿ ಹೆಚ್ಚುತ್ತಾ ಕುಳಿತಿದ್ದಾಗ ಕೈ ಕೊಯ್ದು ಕೊಂಡಿದ್ದನ್ನು ತಾನುಟ್ಟಿದ್ದ ರೇಷ್ಮೆ ಸೀರೆಯನ್ನೇ ಹರಿದು ಅವನ ಬೆರಳಿಗೆ ಸುತ್ತಿ ಕಟ್ಟಿದ್ದನ್ನು ದ್ರೌಪದಿಯೇ ಹೇಳುತ್ತಾಳೆ. ಕೃಷ್ಣ ತೋರಿದ ಕೃಪಗೆ ಕಾರಣವಾದ ಕೃಷ್ಣೆಯ ಋಣ ಹೊತ್ತ ಪ್ರಸಂಗ ಹೀಗೆ ಹೆಣೆಯಲ್ಪಟ್ಟಿದೆ.

## ಅಧ್ಯಾಯ 4

## ನಾಟಕಗಳಲ್ಲಿನ ದ್ರೌಪದಿ

ಜಗತ್ತಿನ ಅತ್ಯಂತ ಪ್ರಾಚೀನ ಕಲೆಗಳಲ್ಲಿ ನಾಟಕ ಪ್ರಮುಖವಾದುದು. ನಾಟಕವೆಂಬುದು ರಂಗಭೂಮಿಯ ಸಲುವಾಗಿಯೇ ರಚಿಸಲ್ಪಟ್ಟದ್ದರೂ, ಅದು ಸಾಹಿತ್ಯದ ಒಂದು ಪ್ರಕಾರವಾಗಿದೆ. ನಾಟಕ ಪ್ರದರ್ಶನಕ್ಕಾಗಿ ರಚಿತವಾಗಿದೆ. ನಾಟಕ ಪ್ರೇಕ್ಷಕನ ಭೌತಿಕ ಸಾಧ್ಯತೆಗಳನ್ನು ಅನುಸರಿಸಿ ಒಂದು ನಿಗದಿತ ಸಮಯದಲ್ಲಿ ನೋಡಿ ಮುಗಿಸುವಂತದ್ದು. ನಾಟಕದ ಸನ್ನಿವೇಶಗಳು ನಟರನಟನೆಯನ್ನು ಅನುಸರಿಸಿ ರಚಿತವಾಗಿರುವುವು. ಗ್ರೀಕರಿಂದ ಪ್ರಾರಂಭವಾದ ನಾಟಕವು ಇಂದು ಇತರ ಸಮೂಹ ಮಾಧ್ಯಮಗಳಿದ್ದಾಗ್ಯೂ ಅದು ಒಂದು ಜೀವಂತ ಕಲೆಯಾಗಿದೆ.

ನಾಟಕಗಳಲ್ಲಿ ಹೆಚ್ಚಾಗಿ ಕಂಡುಬರುವಂತದ್ದು ಪುರಾಣ ಕಥೆಗಳು. ಪರಂಪರಾನುಗತವಾಗಿ ರೂಢಿಯಲ್ಲಿರುವ ಧಾರ್ಮಿಕ ಆಚರಣೆಗಳ ವಿವರಣೆಯಂತೆ ಪುರಾಣ ಕಥೆಗಳಿರುತ್ತವೆ. ಒಂದು ಪರಂಪರೆಯು ಒಪ್ಪಿಕೊಂಡು ಬಂದ ನಂಬಿಕೆ, ಮೌಲ್ಯ ಮತ್ತು ಸಾಮಾಜಿಕ ಸಂಬಂಧಗಳ ಮೂಲ ಪ್ರತಿಯನ್ನು ಅವುಗಳಲ್ಲಿ ಗುರುತಿಸಬಹುದು. "ಪುರಾಣ ಕಥೆಗಳು ಪ್ರಜ್ಞಾ ಪೂರ್ವಕ ನೆಲೆಯಲ್ಲಿ ಕಾಲದಿಂದ ಕಾಲಕ್ಕೆ ಧರ್ಮ ಸಾಹಿತ್ಯಗಳ ಮೂಲಕ ಪ್ರಸಾರ ಹೋದುತ್ತಾ ಹೋದಂತೆ ಅಪ್ರಜ್ಞಾಪೂರ್ವಕವಾಗಿಯೂ ಸಮುದಾಯದ ಧಾರ್ಮಿಕ ವಿಧಿ ಆಚರಣೆ ಸಾಮಾಜಿಕ ಸಂಬಂಧಗಳ ಮೂಲಕ ವ್ಯಕ್ತಿಯ ಅನುಭವದ ವಲಯವನ್ನು ಪ್ರೇವೇಶಿಸುತ್ತದೆ."(*1)

ನಾಟಕದ ಮೂಲ ವಸ್ತು ಆಯ್ಕೆ ಮಾಡಿಕೊಳ್ಳುವುದು. ಪೌರಾಣಿಕ ಕಥೆಗಳನ್ನು ಮಾತ್ರ, ಆಧುನಿಕ ಸಾಹಿತ್ಯದ ಪ್ರಕಾರಗಳಲ್ಲಿ ನಾಟಕವನ್ನು ವಿಶ್ಲೇಷಿಸುವುದರ ಮೂಲಕ ನಾಟಕಕಾರರು ಯಾವ ಯಾವ ದೃಷ್ಟಿಯಿಂದ ಪುರಾಣದ ಪಾತ್ರಗಳನ್ನು ಸೂಕ್ತವಾದ ಕಲ್ಪನೆಯಿಂದ ರಚನೆಮಾಡಿದ್ದಾರೆ. ಎಂಬುದನ್ನು ತಿಳಿದುಕೊಳ್ಳುವುದು ಆಸಕ್ತಿದಾಯಕ ವಿಷಯವಾಗಿದೆ. ಪುರಾಣದ ಕಾವ್ಯದಲ್ಲಿ ಮಹಿಳೆಯ ಪಾತ್ರ ದ್ರೌಪದಿಯನ್ನು ಕುರಿತು ಆಧುನಿಕ ಸಾಹಿತ್ಯ ಪ್ರಕಾರವಾದ 'ನಾಟಕ'ದಲ್ಲಿ ನಾಟಕಕಾರರು ವಿವೇಚಿಸಿದ ರೀತಿಯನ್ನು ಈ ಅಧ್ಯಾಯದ ಮೂಲಕ ಗುರುತಿಸಲಾಗಿದೆ.

ಆಧುನಿಕ ಕನ್ನಡ ಸಾಹಿತ್ಯಲೋಕ ತನ್ನ ಉಜ್ವಲ ಇತಿಹಾಸದಲ್ಲಿ ಕಂಡ ಅತ್ಯಂತ ಪ್ರತಿಭಾವಂತ ನಾಟಕಕಾರರಲ್ಲಿ ಟಿ. ಪಿ. ಕೈಲಾಸಂ ಪ್ರಮುಖರು. ಕನ್ನಡ ರಂಗಭೂಮಿಯನ್ನು ಸಾಂಪ್ರದಾಯಕತೆಗೆ ಸಂಕೋಲೆಗಳಿಂದ ಬಿಡಿಸಿ ಅದಕ್ಕೆ ಹೊಸ ತಿರುವನ್ನು ಆಯಾಮಗಳನ್ನು ತಂದು ಕೊಟ್ಟ ಹಿರಿಮೆ ಅವರದು.

(*1 ಕೆ.ಮರುಳು ಸಿದ್ದಪ್ಪ 'ಆಧುನಿಕ ಕನ್ನಡ ನಾಟಕ ' ಪುಟ ಸಂಖ್ಯೆ 135)

ಕನ್ನಡ ನಾಟಕ ಕ್ಷೇತ್ರದ ಮೇಲೆ ಕೈಲಾಸಂರವರು ಬೀರಿರುವ ಪ್ರಭಾವ ವಿಶಿಷ್ಟವಾದುದು.

ಮೊದಲನೆಯ ಅಂಕಣದ ನಾಟಕ ಟಿ.ಪಿ.ಕೈಲಾಸಂರವರ 'ಕರ್ಣ' ಇದರಲ್ಲಿ ಕರುಣ ಮತ್ತು ರೌದ್ರ ರಸಗಳ ನಿದರ್ಶನಗಳಿವೆ. ಸ್ವಯಂವರದಲ್ಲಿ ಪಾಂಚಲಿಯ ಚುಚ್ಚು ಮಾತುಗಳು ಹಾಗೂ ಕರ್ಣನು ಕುಸಿಯುವುದನ್ನು ವರ್ಣಿಸುವ ಎರಡು ದೃಶ್ಯಗಳಿವೆ.

"ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಅಪಮಾನಗೊಳಿಸಲು ದುಶ್ಯಾಸನ ಮುಂದೆ ಹೆಜ್ಜೆ ಹಾಕಿದ ಕೂಡಲೆ ಕರ್ಣ ರೌದ್ರವನ್ನು ತಾಳಿ ಅವನನ್ನು ಕೊಲ್ಲುವುದಾಗಿ ಬೆದರಿಸುತ್ತಾನೆ. ಆವೇಶಪೂರಿತನಾಗಿ ಕರ್ಣ ಭಾರ್ಗಅಸ್ತ್ರ ಪ್ರಯೋಗಿಸಿ ಸರ್ವನಾಶವನ್ನು ಮಾಡುವ ಬೆದರಿಕೆ ಹಾಕುತ್ತಾನೆ. ದ್ರೌಪದಿಯೂ ಸುದೀರ್ಘವಾದ ಸಂಭಾಷಣೆಯನ್ನು ಮಾಡಿ ಅವಳೂ ಆವೇಶ ಪೂರಿತಳಾಗಿ ತಾನು ಅಗ್ನಿ ಸ್ವರೂಪಳೆಂದು ಸಾರುತ್ತಾಳೆ."(*2)

ಈ ಎರಡು ಸಂಭಾಷಣೆಗಳು, ಈ ದೃಶ್ಯಗಳನ್ನು ಅತಿಮಾನುಷ ಮಟ್ಟಕ್ಕೆ ಮುಟ್ಟಿಸುತ್ತದೆ. ರೌದ್ರ ಭಯಾನಕಗಳಿಂದ ಕೂಡಿದ ಈ ದೃಶ್ಯ ಹೇಗೆ ಕೊನೆಗಾಣುವುದು ಎಂಬುದು ಕುತೂಹಲಕಾರಿಯಾದ ಪ್ರಸಂಗವಾಗಿದೆ. ಇಲ್ಲಿ ದ್ರೌಪದಿಗೆ ಮಾನಪಹರಣವಾಗುವುದನ್ನು ತಡೆಯಲು ಬಂದ ಕರ್ಣನಿಗೆ ದ್ರೌಪದಿಯ ಮೇಲೆ ಇದ್ದ ಪ್ರೀತಿ ವ್ಯಕ್ತವಾಗಿದೆ. ಆದರೆ ದ್ರೌಪದಿಗೆ ತನ್ನನ್ನು ವರಿಸಿದ ನನ್ನ ಗಂಡಂದಿರೇ ಸುಮ್ಮನಿದ್ದಾರೆ. ಪತ್ನಿ ಮಾನಪಹರಣ ನೋಡುವ ಇವರು ಗಂಡಸರೇ? ಎಂದು ನಿಂದಿಸುತ್ತಾಳೆ. ಸ್ವಯಂವರದ ವೇಳೆ ಮೊದಲಿಗೆ ಕರ್ಣನ ಮೇಲೆ ಪ್ರೀತಿ ಬರುವುದು. ಜಾತಿಯ ಬೇಧದಿಂದ ಸುಮ್ಮನಾಗುತ್ತಾಳೆ. ಈ ನಾಟಕದಲ್ಲಿ ದ್ರೌಪದಿಗೆ ಕರ್ಣನ ಮೇಲೆ ಆಸೆ ಇರುವುದು ವ್ಯಕ್ತವಾಗಿದೆ. ಹೀಗೆ ಕೈಲಾಸಂರವರು ಕರ್ಣ ಮತ್ತು ದ್ರೌಪದಿಯ ನಡುವೆ ಇದ್ದ ಸಂಬಂಧ ಅಪ್ರಜ್ಞಾಪೂರ್ವಕವಾಗಿದ್ದರೂ ಅವರು ನಾಟಕದಲ್ಲಿ ಬಹಿರಂಗವಾಗಿ ವ್ಯಕ್ತ ಪಡಿಸುತ್ತಾರೆ. ಈ ನಾಟಕದಲ್ಲಿ ಕರ್ಣನೇ ಪ್ರಮುಖ ನಾಯಕನಾದರೂ, ದ್ರೌಪದಿಯ ಪ್ರೀತಿಯನ್ನು ತೋರಿಸುವಲ್ಲಿ ನಾಟಕಕಾರೂ ಯಶಸ್ವಿಯಾಗಿದ್ದಾರೆ.

ಕೈಲಾಸಂರವರ ಇನ್ನೊಂದು ಪೌರಾಣಿಕ ನಾಟಕ 'ಕೈಲಾಸಂ ಕೀಚಕ' ಈ ನಾಟಕದಲ್ಲಿ ಕೈಲಾಸಂರವರು ನಿಧನದ ನಂತರ ಜಿ.ಪಿ. ರಾಜರತ್ನಂರವರು ನಾಟಕವನ್ನು ಮುಂದುವರೆಸುತ್ತಾರೆ. ನಾಟಕದಲ್ಲಿ ಖಂಡ ತುಂಡವಾಗಿ ಸಂಭಾಷಣೆಗಳನ್ನು ರಚಿಸಿ ಬೇರೆ ಬೇರೆ ಪ್ರಸಂಗಗಳನ್ನು ಪ್ರಸ್ತಾಪಿಸಿದ್ದಾರೆ. ಕೈಲಾಸಂರವರ ಕೀಚಕ ನಾಟಕಕ್ಕೆ ವಿರಾಟ ಪರ್ವದ ಕಥೆಯೇ ಆಧಾರ. ಕೀಚಕ 'ಭಾರತದ ಕಾಮಿ' ಎಂದು ತನ್ನ ನಾಟಕದಲ್ಲಿ ಹೇಳಿದ್ದಾರೆ. ಕೀಚಕನ ಮನಸೋತಾಗ ದ್ರೌಪದಿಗೋಸ್ಕರ ತನ್ನ ಹಳೆಯ ಪತ್ನಿಯರು ದಾಸಿಯಾಗಿರಲಿ, ತಾನೂ ಅವಳಿಗೆ ನಲ್ಲನಾಗುವ ಆಸೆ ಅವನಲ್ಲಿ ಕಾಡಿತು. ಸ್ವಯಂವರದಲ್ಲಿ ದ್ರೌಪದಿಯನ್ನು ಕಂಡು ಅನುರಕ್ತನಾದನಂತೆ,

---

(*2 ಟಿ. ಪಿ ಕೈಲಾಸಂ ನಾಟಕ ಲೋಕ ಪು.ಸ 9)

ದ್ರೌಪದಿಯು ತನಗೆ ಒಲಿದು ಬರಲು ಕೇಳಿದನಂತೆ, ಆದರೆ ಸ್ವಯಂವರದಲ್ಲಿ ಧನುರ್ವಿಧ್ಯೆ ಮೀರಿಸಿದವನಿಗೆ ಮಾತ್ರ ಅ ಹೆಣ್ಣು. ಇದನ್ನು ಕೇಳಿದ ಕೀಚಕ ದ್ರೌಪದಿಗೆ ಸೋತಮನಸ್ಸು ಮತ್ತೆ ಯಾವ ಹೆಣ್ಣಿನ ಕಡೆಗೊ ತಿರುಗದೆ ಹಾಗೇ ಒಲಿದು ನಿಂತನಂತೆ.

ಜಿ.ಪಿ ರಾಜರತ್ನಂರವರು ನಾಟಕದಲ್ಲಿ ದ್ರೌಪದಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿಲ್ಲ. ಆದರೆ ಅವರ ಗಮನವೆಲ್ಲಾ ಕೀಚಕನಿಗೆ ವಿನಿಯೋಗವಾಗಿ ಉಳಿದ ಪಾತ್ರಗಳನ್ನು ಅಲ್ಪ ಸ್ವಲ್ಪ ಬದಲಾವಣೆ ಮಾಡಿದ್ದಾರೆ. ಮಹಾಭಾರತದಲ್ಲಿ 'ಬೆಂಕಿಯ ಮಗಳು' ಎನ್ನಿಸಿ. ಆ ಬೆಂಕಿಯ ಗುಣವನ್ನೇ ತನಗೆ ವಿಶೇಷವಾದ ಬೆಳಕು ಮಾಡಿಕೊಂಡ ದ್ರೌಪದಿಯನ್ನು ಕೈಲಾಸಂರವರು ತನ್ನ ನಾಟಕದಲ್ಲಿ ಕಳೆಗುಂದಿದಂತೆ ಹಾಗೂ ಅವಳಿಗೆ ಬೆದರಿಕೆಯ ಭಾವಬರುವಂತೆ ಮಾಡಿದ್ದಾರೆ. ಆದರೆ ಕೆಲವು ಪ್ರಶ್ನೆಗಳ ಮೂಲಕ ನೋಡಿದಾಗ ಈ ನಾಟಕದಲ್ಲಿ ಕೀಚಕನೇ ಮುಖ್ಯ ಪಾತ್ರನಾಗಬೇಕಾದರೆ ದ್ರೌಪದಿಯು ಸಹ ಇಲ್ಲಿ ಮುಖ್ಯಳೆ! ಆದರೆ ಕೊನೆಯಲ್ಲಿ ದ್ರೌಪದಿಯಿಂದ ಹತ್ಯಗೆ ಕೀಚಕ ಒಳಗಾದರೆ, ಯಾಕೆ ದ್ರೌಪದಿಯನ್ನ ಮುಖ್ಯ ಪಾತ್ರಳಾಗಿ ತೆಗೆದುಕೊಂಡಿಲ್ಲ? ಅವರಿಗೆ ಕೀಚಕ ಎಷ್ಟು ಕಾಮುಕನಾದರೂ ಅವನನ್ನೇ ಅವರ ನಾಟಕದಲ್ಲಿ ಆದರ್ಶವ್ಯಕ್ತಿಯಂತೆ ಯಾಕೆ ಕಾಣಿದ್ದಾರೆ? ದ್ರೌಪದಿಯ ಮೂಲಗುಣವನ್ನು ದೂರದಲ್ಲಿ ಮಿಂಚಿ ಹೊಳೆಯುವಂತೆ ಯಾಕೆ ಮಾಡಿದ್ದಾರೆ.? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವಿಲ್ಲ.

ಈ ನಾಟಕದಲ್ಲಿ ಉಗ್ರ ಮೂರ್ತಿಯ ಪಕ್ಕದಲ್ಲಿ ದ್ರೌಪದಿಯನ್ನ ಸೊರಗುವಂತೆ ಮಾಡಿದ್ದಾರೆ. ಕೀಚಕನ ನಾಟಕದಲ್ಲಿ ಕಥೆಯ ಮಾರ್ಗವೇ ಬೇರೆಯಾದುದರಿಂದ ಕೀಚಕನ ನಿಸ್ಪೃಹತೆಗೆ ದ್ರೌಪದಿ ಕೋಪಗೊಂಡರೆ ಅದು ಅವಳ ಗುಣಕ್ಕೆ ಕುಂದುಬರುವುದು. ಕೀಚಕ ದ್ರೌಪದಿಗೆ ಮನಸೋತು ತನ್ನನೇ ಅರ್ಪಿಸಿಕೊಳ್ಳಲು ಮುಂದಾಗುತ್ತಾನೆ. ಅಜ್ಞಾತವಾಸದಲ್ಲಿ ವೇಷವನ್ನು ಮರೆಮಾಚಿದ ದ್ರೌಪದಿಯನ್ನು ಕಂಡು ಮೋಹಿತನಾಗುತ್ತಾನೆ. ಹಾಗೂ ರೋಮಚನಗೂಂಡ ಕೀಚಕ ಅನಾಥೆಯಾದ ದ್ರೌಪದಿಯ ದುಃಖಸ್ಥಿತಿಗೆ ಮರುಕಗೊಂಡು ಅವಳನ್ನು ಒಂದು ನೆಲೆಯಲ್ಲಿ ನಿಲ್ಲಿಸಬೇಕೆಂದು ನಿರ್ಧರಿಸುತ್ತಾನೆ.

ಕೀಚಕನ ತಂಗಿಯಾದ ಸುದೇಷ್ಣೆಯ ಬಲವಂತಕ್ಕೂ, ಪ್ರಜಾವರ್ಗದ, ಇಷ್ಟಕ್ಕೂ ಸೈರಂಧ್ರಿಯ ಅಸಹಾಯಕತೆಗೂ, ಸೈರಂಧ್ರಿ ತನ್ನನ್ನು ಕೆರಳಿಸಿದ ದ್ರೌಪದಿಯ ನೆನಪಿಗೂ ಕಟ್ಟುಬಿದ್ದು ಈ ಕೀಚಕ ಭೀಮನ ಕೈಯಲ್ಲೇ ಹತನಾಗುತ್ತಾನೆ. ಈ ಕೀಚಕ ಹತನಾದದ್ದು ದ್ರೌಪದಿಯ ಮೇಲಿನ ಪ್ರೀತಿ, ಪ್ರೇಮ, ಕಾಮದಿಂದ ಎಂದು ತಿಳಿಯಬಹುದು. ವಿರಾಟನಗರದಿಂದ ಪ್ರಾರಂಭವಾದ ಈ ನಾಟಕ ಕಲ್ಪನೆಯನ್ನು ನಾಟಕಕಾರರು ದ್ರೌಪದಿಯನ್ನು ಪತಿವ್ರತೆಯಾಗಿ ಉಳಿಸಿದ್ದಾರೆ. ಕೀಚಕ ನಾಟಕವು ಐದು ದೃಶ್ಯಗಳಲ್ಲಿ ತಕ್ಕ ಮಟ್ಟಿಗೆ ರೂಪುಗೊಂಡಿತ್ತು. ವ್ಯಾಸ ಭಾರತದಲ್ಲಿ ಕೀಚಕ ಕೇವಲ ಕಾಮುಕ, ಬಲಿಷ್ಟನಾದರೂ ಹೇಯ ಪ್ರವೃತ್ತಿಯವನು.

ಜಿ.ಪಿ.ರಾಜರತ್ನಂರವರು ಅವನನ್ನು ಒಂದು ಆದರ್ಶ ವ್ಯಕ್ತಿಯಾಗಿಯೇ ಕಲ್ಪಿಸಿಕೊಂಡರು. ದ್ರೌಪದಿ ಸ್ವಯಂವರದಲ್ಲಿ ಆಕೆಯನ್ನು ನೋಡಿದ ಕೀಚಕ ಮುಗ್ಧನಾಗಿ, ಅನಂತರ ಅವಿವಾಹಿತನಾಗಿಯೇ ಉಳಿದನಂತೆ.

ಸಂಪ್ರದಾಯಕ್ಕೆ ಪ್ರತಿಭಟನೆಯಾಗಿ ಈ ನಾಟಕ ಕುತೂಹಲಕರವಾಗಿದೆ. ವಸ್ತು ವಿನ್ಯಾಸದಲ್ಲಿ ಚಾತುರ್ಯಎದೆ. ರಂಗಭೂಮಿಯಲ್ಲಿ ಯಶಸ್ವಿಯಾಗುವಂತೆ ಕಡೆಯವರೆಗೆ ಪ್ರೇಕ್ಷಕರ ಕುತೂಹಲವನ್ನು ಉಳಿಸಿಕೊಳ್ಳುತ್ತದೆ. ಸಾವಿನ ಸಮಯದಲ್ಲಿ ಕೀಚಕ ಪಶ್ಚಾತ್ತಾಪದಿಂದ ಕೃಷ್ಣನ ಭಗವತ್ ಶಕ್ತಿಯನ್ನು ಒಪ್ಪಿಕೊಂಡರೂ ಕೈಲಾಸಂ ಅವರ ಕೀಚಕನಂತೆ ಸಾತ್ವಿಕ ಶಿರೋಮಣಿಯಲ್ಲ. ರಕ್ತ ಮಾಂಸ ತುಂಬಿದ ಜೀವಂತ ಶಕ್ತಿ, ಈ ನಾಟಕದ ಉತ್ತರ ಕುಮಾರನ ಪಾತ್ರ ಕಲ್ಪನೆ ವಿನೂತನವಾಗಿದೆ. ಆತನ ಮಾತುಗಳಲ್ಲಿ ಮೇಲು ನೋಟಕ್ಕೆ ಹಾಸ್ಯಎದ್ದರೂ ಅಂತರ್ಯದಲ್ಲಿ ಪರಂಪರಾಗತ ನಂಬಿಕೆಗಳ ವಿಮರ್ಶೆಯಿದ್ದ ನಾಟಕಕಾರರ ಆಶಯಗಳನ್ನು ಪ್ರತಿಬಿಂಬಿಸುತ್ತಿರುವಂತಿದೆ.

ಆಧುನಿಕ ಕನ್ನಡದಲ್ಲಿ ಪೌರಾಣಿಕ ನಾಟಕಗಳನ್ನು ಕೈಲಾಸಂರವರು ಬರೆಯಲಿಲ್ಲ. ಆದರೆ ಜಿ.ಪಿ.ರಾಜರತ್ನಂ ರವರು ಕೈಲಾಸಂರವರ ನಿರೂಪಣೆಯ ಆಧಾರದ ಮೇಲೆ ಕೀಚಕನನ್ನು ಕಲ್ಪಿಸಿದ್ದಾರೆ. ಈ ಕೃತಿಯಲ್ಲಿ ಯಥೋಕ್ತವಾದ ಕೈಲಾಸಂ ಕಲ್ಪನೆಯನ್ನು ಕಾಣಿಸಿರುವೆವೆಂದು ಹೇಳುವುದು ಸಾಹಸವಾಗುತ್ತದೆ ಎಂದು ರಾಜರತ್ನಂ ರವರೇ ಹೇಳಿದ್ದಾರೆ. ಪುರಾಣಗಳ ಖಳ ನಾಯಕರನ್ನೆಲ್ಲಾ ಉದಾತ್ತೀಕರಿಸಲು ಹೊರಟ ನವೋದಯ ನಾಟಕಕಾರರಿಗೆ ಮೇಲ್ಪಂಕ್ತಿ ಹಾಕಿಕೊಟ್ಟ ಶ್ರೀಯವರ ಪ್ರಭಾವಕ್ಕೆ ಕೈಲಾಸಂರವರೂ ಒಳಗಾಗಿದ್ದರೆಂಬುದೇ ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವಾಗಿದೆ. ಮಹಾಭಾರತದಲ್ಲಿ ಬರುವ ಕಾಮುಕ ಕೀಚಕನಿಗೆ ದ್ರೌಪದಿ ಮತ್ತು ಭೀಮರಿಂದ ಒದಗಿದ ದುರ್ಗತಿಯ ಕಥೆಯನ್ನೇ ವಸ್ತುವನ್ನಾಗಿ ಪಡೆದ ಕೈಲಾಸಂ ರವರು ತಮ್ಮ ನಾಟಕದಲ್ಲಿ ಮೂಲವನ್ನೂ ಆಮೂಲಾಗ್ರವಾಗಿ ಬದಲಾಯಿಸಿದ್ದಾರೆ.

ಮಹಾಭಾರತದಲ್ಲಿ ದ್ರೌಪದಿಯ ದುಃಖದ ಮನದಾಳದ ಮಾತುಗಳನ್ನು ಇಲ್ಲಿ ವ್ಯಕ್ತಪಡಿಸುತ್ತಾ. ಎ.ಅಶ್ವತ್ಥ್‌ನಾರಾಯಣಮೂರ್ತಿಯವರು 'ವೀರಅಭಿಮನ್ಯು' ಎಂಬ ನಾಟಕದಲ್ಲಿ ದ್ರೌಪದಿಯ ಪಾತ್ರವನ್ನು ಚಿತ್ರಿಸಿದ್ದಾರೆ ಎಂಬುದು ಗಮನಾರ್ಹ.

ದ್ರೌಪದಿಯು ತನ್ನ ದುಃಖದ ತೋಳಲಾಟದಿಂದ "ನನ್ನ ತಂದೆ ದೃಪದ ರಾಜನ ಹೊಟ್ಟೆಯಲ್ಲಿ ಹುಟ್ಟಿದರೇನು? ಶೂರರಾದ ಐವರ ಪತಿಗಳ ಕರವಿಡಿದರೇನು? ಏನಾದರೇನು? ವಸ್ತ್ರಾಪಹರಣ ಕಾಲದಲ್ಲಿ ಆದ ಅಪಮಾನದಿಂದ ಈಗಲೇ ನನ್ನ ಹೃದಯ ಬೆಯುವಂತಿರುವುದು. ಕೀಚಕನಿಂದ ಅಷ್ಟು ಶ್ರಮ ಪಟ್ಟರು ಶೂರರಾದ ನನ್ನ ಪತಿಗಳು ಸುಮ್ಮನೇ ನೋಡುತ್ತಾ ಕುಳಿತಿದ್ದರು. ಪತಿಗಳ ನಿಂದನೆಯನ್ನು ನಾನು ಏಕೆ

ಮಾಡಲಿ! ನನ್ನ ಹಣೆಬರಹ. ಹೀಗಿರುವಾಗ ಯಾರನ್ನು ನಿಂದಸಿದರೇನು ಫಲ! ನಾನೆಂತಹ ಪಾಪಿ!" ಹೀಗೆ ನಿಂದನೆಯ ಮಾತುಗಳ ಜೊತೆಗೆ ಅವಳ ಅಂತರಾಳದ ಮಾತುಗಳು ಅಭಿಮನ್ಯುವಿನಲ್ಲಿ ವ್ಯಕ್ತಪಡಿಸುತ್ತಾಳೆ.

"ನಿನ್ನನ್ನು ಹೆತ್ತ ನನ್ನ ತಂಗಿ ಸುಭದ್ರೆಯೇ ಅದೃಷ್ಟವಂತಳು" ಎಂದು ಹೇಳಿ ದ್ರೌಪದಿ ತನ್ನ ನೋವು ದುಃಖವನ್ನು ಮನಸ್ಸಿನಲ್ಲಿಯೇ ಅಡಗಿಸಿ ಕೊಳ್ಳುತ್ತಾಳೆ. ಅರ್ಜುನನು ಸುಭದ್ರೆ ಮತ್ತು ಅಭಿಮನ್ಯುವನ್ನು ನೋಡಿಕೊಳ್ಳುವಷ್ಟು ದ್ರೌಪದಿಯನ್ನು ನೋಡುವುದಿಲ್ಲ. ಅವಳ ಮಕ್ಕಳ ಬಗ್ಗೆ ನಿರ್ಲಕ್ಷ್ಯ ಮಾಡುವುದು ಇದು ಯಾವುದು ಅವಳಿಗೆ ಹಿಡಿಸದು. ಇಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಹಾಗೂ ಹೊಟ್ಟೆಕಿಚ್ಚು ಎಂಬುದು ಹೆಣ್ಣಿನ ಎರಡನೇ ಹೆಸರು ಎನ್ನುವ ಹಾಗೆ ದ್ರೌಪದಿಯಲ್ಲೂ ಸಹ ಒಳಗೊಂಡಿರುವುದು ಸ್ಪಷ್ಟವಾಗುತ್ತದೆ. ಹೀಗೆ ದ್ರೌಪದಿಯು ತನ್ನ ಅಂತರಂಗದ ಭಾವನೆಗಳನ್ನು ಅಭಿಮನ್ಯುವಿನಲ್ಲಿ ವ್ಯಕ್ತಪಡಿಸುವಾಗ ಅವಳ ನೋವಿಗೆ ಸ್ಪಂದಿಸಲು ಭೀಮ ಬರುತ್ತಾನೆ. ಭೀಮನನ್ನು ಕಂಡು "ಪ್ರಿಯಾ ಎಷ್ಟು ಗಂಭೀರವಾಗಿದ್ದಾನೆ, ಈ ಅಭಿಮನ್ಯು ಎಲ್ಲರ ಜೊತೆ ಎಷ್ಟು ಚನ್ನಾಗಿ ಹೊಂದಿಕೊಳ್ಳುವನು. ಎಷ್ಟು ಮಂದಿ ಪುತ್ರರಿದ್ದರೇನು? ಅಭಿಮನ್ಯುವಿನಂತಹ ಒಬ್ಬ ಮಗನಿದ್ದರೆ ಸಾಕು" ಎಂದು ಹೇಳುತ್ತಾ ತನ್ನ ಮಕ್ಕಳ ಮುಖವನ್ನು ನೋಡುತ್ತಾ "ಯಾರಿಗೂ ಇಷ್ಟವಿಲ್ಲದಿರುವ ಈ ಮಕ್ಕಳು ಏಕೆ ಬೇಕು? ದ್ರೌಪದಿಯಂತಹ ನಿರ್ಭಾಗ್ಯಳು ಯಾರು ಇಲ್ಲವೆ? ನನ್ನ ಶತ್ರುವಿನ ಎದುರಿನಲ್ಲಿ ಹೆಮ್ಮಾರಿಯಂತೆ ಬಿರುಗೂದಲು ಬಿಟ್ಟುಕೊಂಡು ಇರಬೇಕಲ್ಲ! ಏನೂ ಮಾಡುವುದು, ಈ ದುಃಖಕ್ಕೆ ಯಾರು ಹೊಣೆ? ಇದು ನನ್ನ ಹಣೆಬರಹವೇ? ಇಲ್ಲವೇ ಕಷ್ಟಗಳಿಗಾಗಿಯೇ ನಾನು ಹುಟ್ಟಿದೇನೇ?"(*3) ಎಂದು ದುಃಖದಿಂದ ಕೊರಗುತ್ತ ತನ್ನ ಧೋರಣೆಯನ್ನು ವ್ಯಕ್ತಪಡಿಸುತ್ತಾಳೆ.

ಅದಕ್ಕೆ ಭೀಮ ಅಡಿಗಡಿಗೂ ನನ್ನ ಪ್ರತಿಜ್ಞೆಯನ್ನು ಸ್ಮರಣೆ ಮಾಡುತ್ತಿರುವೆಯಾ, ನಾನು ಮರೆಯಲಿಲ್ಲ, ಆ ದುಶ್ಯಾಸನ ಎದೆಯನ್ನು ಸೀಳಿ ಅವನ ರಕ್ತವನ್ನು ಹೀರಿ ಅವನ ಹೃದಯವನ್ನು ತಲೆಗಿಟ್ಟು ಅವನ ದಂತ ಪಂಕಿಗಳಿಂದ ನಿನ್ನ ತಲೆಯನ್ನು ಬಾಚಿ ತುರುಬು ಹಾಕುವೇನು ಇದು ನನ್ನ ಶಪಥ!

ಇಲ್ಲಿ ದ್ರೌಪದಿಯ ದುಃಖವು ಭೀಮನನ್ನು ಕೆರಳುವಂತೆ ಮಾಡುತ್ತದೆ. ದ್ರೌಪದಿ ಹೇಳಿದರೆ ಮಾತ್ರವಲ್ಲ ನೀನು ಆಡಿದಂತೆ ಮಾಡಬೇಕೇಂದು. ಅದು ನನ್ನ ಇಚ್ಛೆ. ಆದರೆ ಸುಮ್ಮನೆ ಇಚ್ಛಿಸಿದರೆ ಏನಾಗುವುದು, ನೀನು ಅಣ್ಣನ ಅಜ್ಞಾಧಾರಕನು ಎಂದು ನಿಂದನೆ ಮಾಡುವಳು. ಭೀಮನು ತಾನೆ ಏನು ಮಾಡಲು ಸಾಧ್ಯ. ಅಣ್ಣನ ಆಜ್ಞೆ ಮೀರುವುದಿಲ್ಲ. ದ್ರೌಪದಿಯ ದುಃಖಕ್ಕೆ ಪಾಲುದಾರನಾಗುವುದು ಅಷ್ಟೇ! ಆದರೆ ಅವಳ ದುಃಖದ ಸಮಪಾಲು ಏನಾದರೂ ತೆಗೆದುಕೊಳ್ಳಲು ಸಾಧ್ಯವೇ? ಪಂಚಪತಿಯರನ್ನು ಪಡೆದರೂ ಅವಳಲ್ಲಿ ದುಃಖವಂತೂ ಮಾಸಲಿಲ್ಲ. ಇದಕ್ಕೆ ಭೀಮ ಸಂತೈಸುವಾಗ ದ್ರೌಪದಿ"ಸಮಧಾನವೆಲ್ಲಿಂದ ಬರಬೇಕು

(*3 ಎ.ಅಶ್ವಥ್‌ನಾರಾಯಣಮೂರ್ತಿ 'ವೀರ ಅಭಿಮನ್ಯು' ಪು. ಸ.36)

ಪ್ರಾಣನಾಥ! ಪಾಂಡವರ ಪತ್ನಿಯೆಂದರೆ ಕೌರವರಿಂದ ಮಾನಭಂಗ, ಬರಿ ವನವಾಸ ಅಮೇಲೆ ವಿರಾಟರಾಯನಲ್ಲಿ ದಾಸ್ಯತ್ವ, ಪುತ್ರವಿಯೋಗದ ದುಃಖ, ದುಃಖಗಳ ಕೋಟಲೆಯಲ್ಲಿ ಸಿಕ್ಕಿರುವ ಪಾಪಿ, ಐದು ಜನ ಪುತ್ರರ ತಲೆಗಳನ್ನು ಕಡಿದಿರುವವನನ್ನು ಕಡಿದರೂ ನನ್ನ ಮಕ್ಕಳು ಬಂದಂತಾಯಿತೆ? ಸಂತೋಷವೆನ್ನುವ ಶಬ್ದವನ್ನೇ ದುರ್ದೈವವು ಈ ಪಾಂಚಲಿಯ ಫಲಕದಿಂದ ತೊಡೆದು ಹಾಕಿದಂತೆ ತೋರುವುದೇನೋ? ಕೃಷ್ಣ! ಕೃಷ್ಣ! ವಿಜಯದ ಆನಂದವನ್ನು ಅನುಭವಿಸುವುದರೊಳಗಾಗಿಯೇ ಪುತ್ರ ವಿಯೋಗದ ದುಃಖದ ಕಾರ್ಗತ್ತಲೆಯನ್ನು ಕೊಟ್ಟೆಯಾ? ಅಣ್ಣ ಈ ದುಃಖ ದುರಂತವನ್ನು ಹೇಗೆ ಸಹಿಸಲಿ ಹೇಳು?" ಈ ಕಷ್ಟದಲ್ಲಿಯೂ ದ್ರೌಪದಿ ರೋಷ, ದ್ವೇಷಗಳನ್ನು ಬೆಳಸಿ ಯಾರು ಯಾರನ್ನು ನಾಶ ಮಾಡಬೇಕೆಂದು ನಿರ್ಧರಿಸುತ್ತಾಳೆ. ಈ ರೋಷ ಆವೇಶಗಳು ಭೀಮನಲ್ಲಿ ಕೆರಳುವಂತೆ ಮಾಡುತ್ತಾಳೆ. ಅವನಿಂದಲೇ ಹತ್ಯೆಗಳನ್ನು ಮಾಡಿಸಲು ನಿರ್ದರಿಸುತ್ತಾಳೆ.

ಹೀಗೆ ದುಃಖದಿಂದ ಕಣ್ಣೀರು ಸುರಿಸುತ್ತಾ, ಅಳುತ್ತಾ, ರೋಧಿಸುತ್ತಾ ಕಣ್ಣುಗಳು ಕೆಂಪಗೆ ಕೆಂಡದಂತೆ ಮಾಡಿಕೊಂಡು ಮುಂದೆ ಬರುತ್ತಾಳೆ. ಮುಂದೆ ಬರುವ ದೃಶ್ಯವನ್ನು ನೋಡಲಾರದೆ "ಶಿವ!ಶಿವಾಃ ಶಿಶು ಹತ್ಯಾ ದೋಷವು, ದೋಷಕ ಕೋಟಿಯಲ್ಲಿ ಮಹಾ ದುರಂತವಾದುದು. ಬ್ರಹ್ಮ ಹತ್ಯ ದೋಷವು ಇದಕ್ಕೆ ಪ್ರಾಯಶ್ಚವುತ್ತವೇ ಇಲ್ಲ, ಈಗ ಮಾಡುವುದೇನು"?

ದ್ರೌಪದಿಯ ಕರುಳ ಬಳ್ಳಿಯನ್ನು ತನ್ನ ಕಣ್ಣಾರೆ ನೋಡಿ ಈ ದುಃಖವನ್ನು ಸಹಿಸಲಾರದೆ, ಧರ್ಮ ಅಧರ್ಮಗಳ ಪರಿಪಾಲನೆಯನ್ನು ಮೀರಿ ನಡೆದಿರು ಈ ಶಿಶು ಹತ್ಯೆಯನ್ನು ನೋಡಿ ಇದನ್ನು ಮಾಡಿದವರಿಗೆ ಪ್ರಯಶ್ಚಿತವನ್ನು ಕೊಡು ಎಂದು ಕೃಷ್ಣನಲ್ಲಿ ಬೇಡುತ್ತಾಳೆ.

ದ್ರೌಪದಿಯಲ್ಲಿದ್ದುದು ಒಂದೇ ಒಂದು ಆಸೆ, ಆಸೆಯನ್ನು ಯಾರಲೂ ಹೇಳಲೂ ಆಗದೇ ತನ್ನಲ್ಲಿಯೇ ಅಡಗಿಸಿಕೊಂಡು, ಒಂದು ದಿನ ಕೃಷ್ಣನಲ್ಲಿ ಅವಳ ಬಯಕೆಯನ್ನು ತಿಳಿಸುತ್ತಾಳೆ. "ಅಣ್ಣಯ್ಯ ನನ್ನ ಮನದಾಸೆ ನಿನಗೆ ತಿಳಿಯದೆಂದರೇನು? ಆದರೂ ನಿನ್ನ ಅಣತಿಯ ಮೇರೆಗೆ ನಾನೇ ತಿಳಿಸುತ್ತೇನೆ, ಪಂಚಪಾಂಡವರ ಧರ್ಮಪತ್ನಿಯಾಗಿ ಕಾಯ, ವಾಚ, ಮನಸಾ ಅವರ ಹಿತಕ್ಕಾಗಿ ಶ್ರಮಿಸುತ್ತಾ, ಸಾಧ್ವಿಸತಿಯಾಗಿ ಸ್ತ್ರೀ ಕುಲದ ಕಣ್ಣಾಗಿ ಪ್ರಜ್ವಲಿಸಬೇಕು ಪತಿವ್ರತಾ ಶಿರೋಮಣಿ ಎಂಬ ಕೀರ್ತಿಗೆ ಪಾತ್ರಳಾಗಬೇಕು. ಅಷ್ಟು ಮಾತ್ರವಲ್ಲದೇ ತುಂಬಿದ ಸಭೆಯಲ್ಲಿ ನನ್ನ ವಸ್ತ್ರಾಪಹರಣ ಮಾಡಿ ಮಾನಭಂಗ ಮಾಡಲು ಪ್ರಯತ್ನಿಸಿದ ಆ ಕೌರವ ದುರ್ಯೋಧನ, ದುಶ್ಯಾಸನರುಗಳನ್ನು ನಾಶಮಾಡಬೇಕೆಂದು ನನ್ನ ಮನದಲ್ಲಿ ಸದಾ ನೆಲೆಯಾಗಿ ನಿಂತಿರುವ ಮಹಾದಾಸೆ ಅಣ್ಣಯ್ಯ"

ಹೀಗೆ ಯಾರಲ್ಲೂ ವ್ಯಕ್ತಪಡಿಸಲಾಗದ ದ್ರೌಪದಿ ತನ್ನ ಮನಸ್ಸಿನಲ್ಲಿರುವುದೆಲ್ಲಾ ಹೇಳಿ ಹೊರಹೊಮ್ಮುವಂತೆ ಸೀತಾ ರಾಮಯ್ಯರಡ್ಡಿಯವರು ಒಂದು ಕಡೆ ಕೃಷ್ಣನೊಡನೆ ಸಂಭಾಷಣೆಯ ಮೂಲಕ ವಿವರಿಸಿದ್ದಾರೆ. ಅವಳ ಬಯಕೆ, ಆಸೆ ಇನ್ನು ಉಳಿದಂತೆ ನಾಟಕಕಾರರಿಗೆ ಭಾಸವಾಗುವಂತೆ ಕಾಣುತ್ತದೆ. ತನ್ನ ಪತಿಗಳಿಂದ ಏನನ್ನು ಪಡೆಯಬೇಕು ಅದೆಲ್ಲಾ ಪಡೆದ ಅವಳು ಯಾರನ್ನು ನಾಶಮಾಡಬೇಕು ಅವರೆಲ್ಲಾ ನಾಶಮಾಡಿದರೂ ಅವಳಲ್ಲಿರುವ ಒಂದು ಬಯಕೆ ಕೃಷ್ಣನಲ್ಲಿ ಹೇಳುವ ಪ್ರಸಂಗ ಒದಗಿದೆ. ಅದೇನೆಂದರೆ ದ್ರೌಪದಿಗೆ ಸಕಲ ರೀತಿಯಲ್ಲೂ ಆನಂದ ನೀಡಿ ತೃಪ್ತಿ ಪಡಿಸುವ ಐವರು ಪತಿಗಳು ಬಂದ ಆಪತ್ತನ್ನು ಬೇಡಿದಾಕ್ಷಣ ಪಾರು ಮಾಡುವರು. ಆದರೂ ಕರ್ಣನನ್ನು ಪತಿಯಾಗಿ ಮಾಡಿಕೊಳ್ಳುವ ಬಯಕೆ ವ್ಯಕ್ತಪಡಿಸುವುದು. ಆಸೆಗೆ ಮಿತಿಯಿಲ್ಲದೆ ಮಾನವನಲ್ಲಿ ಕೊನೆಯಿಲ್ಲ ಎಂಬುದಕ್ಕೆ ದ್ರೌಪದಿಯು ನಿದರ್ಶನಳಾಗುತ್ತಾಳೆ. ಸ್ವಯಂವರದ ಆರಂಭದಲ್ಲಿ ಕರ್ಣನ ಮೇಲಿನ ಆಸೆ ಇದ್ದೂ ಕೊನೆಯವರಗೂ ಆ ಆಸೆಯನ್ನು ತನ್ನಲ್ಲೇ ಮರೆಮಾಚಿರುತ್ತಾಳೆ. ಆ ಆಸೆಯನ್ನು ಹೇಳಿದರೆ ತನ್ನ ಪತಿಗಳು ತನ್ನನ್ನು ಎಲ್ಲಿ ಅವಮಾನಿಸುವರೊ ಎಂಬ ಭೀತಿಯಿಂದ ಒಂದು ದಿನ ಕೃಷ್ಣನಲ್ಲಿ ತನ್ನ ಆಸೆ ತೋಡಿಕೊಳ್ಳುತ್ತಾಳೆ. ಆದರೆ ಈ ಆಸೆ ಯಾವತ್ತೂ ನೆರವೇರುವುದಿಲ್ಲ. ಅವಳಲ್ಲಿದ್ದ ಬಯಕೆಯು ಯಾವುದು ಈಡೇರುವುದಿಲ್ಲ.

ರಾಜಪ್ಪ ದಳವಾಯಿಯವರ 'ಸುಯೋಧನ' ಎಂಬ ನಾಟಕದಲ್ಲಿ ದ್ರೌಪದಿಯ ಪಾತ್ರವನ್ನು ಕೊನೆಯಲ್ಲಿ ತರುತ್ತಾರೆ. ಏಕೆಂದರೆ ಸುಯೋಧನ ನಾಟಕದ ಕೇಂದ್ರ ಬಿಂದು. ಸುಯೋಧನನ ಎಲ್ಲಾ ಗುಣ, ಛಲ ಹೊಗಳಿ ಕೊನೆಗೆ ಅವನ ನಾಶವಾಗುವ ಸಂದರ್ಭದಲ್ಲಿ, ದ್ರೌಪದಿಯಲ್ಲಿದ್ದ ಸೇಡನ್ನು ತೀರಿಸಿ ಬಿಡುವುದಕ್ಕೆ ಕುರುಕ್ಷೇತ್ರ ಯುದ್ಧದಲ್ಲಿ ತಂದು ನಿಲ್ಲಿಸುತ್ತಾರೆ. ಎಂಬುದು ಈ ನಾಟಕದಲ್ಲಿ ವ್ಯಕ್ತವಾಗಿದೆ.

ಪಂಚಪಾಂಡವರನ್ನು ವರಿಸಿದಾಗಿನಿಂದಲೂ ದ್ರೌಪದಿ ತನ್ನ ಬದುಕಿನುದ್ದಕ್ಕೂ ಬರೀ ನೋವು ದುಃಖವನ್ನೇ ಅನುಭವಿಸಿದವಳೂ. ಈ ನೋವಿನ ಜೊತೆಯಲ್ಲಿಯೇ ಅವಳು ಹಠ ಸೇಡು ಬೆಳಸಿಕೊಂಡು ಬಂದಳು. ಇವಳ ಮನಸ್ಸಿನಲ್ಲಿ ಉರಿಯುತ್ತಿರುವ ಬೆಂಕಿಯ ಕಿಚ್ಚು ಅವಳ ಎಲ್ಲಾ ಸೇಡುಗಳನ್ನು ಕೊನೆಗೊಳಿಸಲು ನಾಟಕಕಾರ ಮುಂದಾಗುತ್ತಾರೆ.

ದ್ರೌಪದಿ ಸುಯೋಧನರ ನಡುವೆ ನಡೆದ ಸಂಭಾಷಣೆಯಲ್ಲಿ ದ್ರೌಪದಿ "ಎಲವೋ ದುರ್ಯೋಧನ ನನ್ನ ಜೀವನ ಇಂದು ಸಾರ್ಥಕವಾಯಿತು. ನಿನ್ನನ್ನು ಹೀಗೆ ಎಂದು ನೋಡಿಯೇನೊ ಎಂಬ ಬಯಕೆ. ನೆಮ್ಮದಿಯ ಜೀವನವನ್ನೇ ಸರ್ವನಾಶ ಮಾಡಿದ ನೀನು ಇಂದು ಸಾಯುತ್ತಿರುವುದನ್ನು ನೋಡಿ ಬಹಳ ಸಂತೋಷದಿಂದ ಪಡುತ್ತಿದ್ದೇನೆ." ಇಲ್ಲಿ ದ್ರೌಪದಿಯ ಮನಸ್ಸಿನಲ್ಲಿದ್ದ ಆವೇಶ, ತಳಮಳ, ಸೇಡು, ಕಿಚ್ಚು. ಹೊರಹೊಮ್ಮುತ್ತದೆ. ತನ್ನ ಜೀವನವು ಸರ್ವನಾಶವಾಗುವುದಕ್ಕೆ ದುರ್ಯೋಧನನೆ ಕಾರಣ. ದುರ್ಯೋಧನನ

'ಛಲ' ದ್ರೌಪದಿಯ 'ಸೇಡು' ಇವರಿಬ್ಬರ ನಡುವೆ ನಿರಂತರವಾಗಿ ನಡೆದು ಕೊನೆಗೆ ಛಲದಿಂದ ದುರ್ಯೋಧನ ನಾಶವಾಗುತ್ತಾನೆ. ದ್ರೌಪದಿಯ ಮನಸ್ಸಿನಲ್ಲಿದ್ದ ಬೆಂಕಿಯ ಕಿಡಿಗಳನ್ನು ನಿಂದನೆ ಮಾತುಗಳಿಂದ ಸಿಡಿಸುತ್ತಾಳೆ.

ಅರಮನೆಯಲ್ಲಿ ಅಂದು ಜಾರಿಬಿದ್ದ ನಿನ್ನನ್ನು ನೋಡಿ ಸಹಜತೆಯಿಂದ ನಕ್ಕ ನನಗೆ ತೊಡೆ ತೋರಿದೆಯ ದುರಹಂಕಾರಿ. ಈಗ ನೋಡು ತೊಡೆ ಮುರಿದು ಹೇಗೆ ಬಿದ್ದು ಕೊಂಡಿದ್ದೀಯ. ಎಂದೂ ಆಗಿದ್ದ ತಪ್ಪನ್ನು ಮತ್ತೆ ಮತ್ತೆ ಕೆಣಕುವ ಬಯಕೆ ದ್ರೌಪದಿಯಲ್ಲಿ ತರುತ್ತಾರೆ.

ಬಾನುಮತಿಯಂಥ ಚಿನ್ನದಂಥ ಹೆಂಡತಿಯಿದ್ದು ಸಹ ಎಲ್ಲರೆದುರು ರಾಜಸಭೆಯಲ್ಲಿ ನನ್ನ ಮೈ ನೋಡಲು ಆಸೆಪಟ್ಟಿದ್ದೆ, ಆದರೆ ಇಂದು ನಿನ್ನ ಮೈ ಹೇಗಿದೆ? ಬಲಭೀಮನ ಗದಾಘಾತದಿಂದ ಗಾಂಧಾರಿಯ ಮಕ್ಕಳನ್ನು ಬಲಿತೆಗೆದು ಕೊಳ್ಳುವ ರೂಪರೇಖೆಗಳು ಹುಟ್ಟಿನಿಂದಲೇ ನನಗೆ ಬಳುವಳಿಯಾಗಿ ಬಂದಿರುವುದು. ನನ್ನ ಸೃಷ್ಟಿಯಾದುದೇ ನಿನಗೆ ಮತ್ತು ನಿನ್ನ ವಂಶಕ್ಕೆ ಇಂಥ ಸ್ಥಿತಿಯನ್ನೋಡಲು. ಇಡೀ ರಾಜಸಭೆಯಲ್ಲಿ ನನ್ನನ್ನು ನನ್ನ ಪತಿಯ ಎದುರಿನಲ್ಲಿಯೇ ಅವಮಾನಗೊಳಿಸಬೇಕೆಂದು ನಿನ್ನ ಮನದ ಬಯಕೆ.

ರಾಜಪ್ಪ ದಳವಾಯಿಯವರು ದ್ರೌಪದಿಯ ಬಾಯಿಂದಲೇ ದುರ್ಯೋಧನನ ದ್ರೌಪದಿಯ ಮೈನೋಡವ ಆಸೆ, ಬಯಕೆ, ಎಂದೆಲ್ಲಾ ಹೇಳಿಸಿರುತ್ತಾರೆ. ದ್ರೌಪದಿಯು ಇಡೀ ದುರ್ಯೋಧನನ ವಂಶವನ್ನೇ ನಾಶಮಾಡಲು ಸಿದ್ಧಳಿರುತ್ತಾಳೆ. ನಾಟಕಕಾರರು ಛಲ ಮತ್ತು ಸೇಡು ಎಂಬ ದುರ್ಯೋಧನ ಮತ್ತು ದ್ರೌಪದಿಯು ಎರಡು ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಆದಕ್ಕೆ ನಾಟಕಕಾರರು ನಾಟಕದ ಕೊನೆಯ ದೃಶ್ಯದಲ್ಲಿ ದ್ರೌಪದಿಯ ಸೇಡಿನ ಮೂಲಕ ಸಮಾಪ್ತಿಗೊಳಿಸಿದ್ದಾರೆ.

ಪ್ರಜಾವಾಣಿಯ ಮೊದಲ ಸಂಪಾದಕರಾದ ಬಿ. ಪುಟ್ಟಸ್ವಾಮಯ್ಯನವರು ಕುರುಕ್ಷೇತ್ರ, ದಶಾವತಾರ, ಸಂಪೂರ್ಣ ರಾಮಾಯಣ, ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವರು ಸನ್ನಿವೇಷ ನಿರ್ಮಾಣ ಪಾತ್ರ ರಚನೆಯಲ್ಲಿ ವೃತ್ತಿರಂಗಭೂಮಿ ನಾಟಕಕಾರರಿಗಿಂತ ಪರಿಣಿತರು. ಪಾತ್ರಗಳ ಸ್ವಾಭಾವದಲ್ಲಿ ಮಾನವೀಯ ಗುಣಗಳನ್ನು ದಟ್ಟಗೊಳಿಸಿ ಪುರಾಣಗಳನ್ನು ಆಧುನಿಕ ಕಾಲದ ಸಮೀಪಕ್ಕೆ ತರುವ ಹವಣಿಕೆ ಅವರ ನಾಟಕಗಳಲ್ಲಿದೆ.

ಕುರುಕ್ಷೇತ್ರ ನಾಟಕದಲ್ಲಿ ಬಿ.ಪುಟ್ಟಸ್ವಾಮಯ್ಯನವರು ದ್ರೌಪದಿಯ ಪಾತ್ರವನ್ನು ಒಂದು ವಿಶಿಷ್ಟ ಪಾತ್ರದ ಮೂಲಕ ಆಧುನಿಕಕ್ಕೆ ಸಮೀಕರಿಸಿದ್ದಾರೆ. ಎಂಬುದು ನಾಟಕದ ವಿರಾಟಪರ್ವದಿಂದ ದ್ರೌಪದಿಯ ಪ್ರಸಂಗ ಬರುವುದು.

ಈ ದೃಶ್ಯದಲ್ಲಿ ದ್ರೌಪದಿಯು ಚಿಂತಿಸುತ್ತಾ ಪ್ರವೇಶಿಸಿ ತನ್ನಗಾದ ಕಷ್ಟಗಳಿಗೆ ಕೃಷ್ಣನಲ್ಲಿ ಈ ರೀತಿ ಮೊರೆಯಿಡುತಾಳೆ. "ಹೇ ಕೃಷ್ಣ! ದೀನಾದಯಾನಿದಿ! ವಾಸುದೇವ! ನಿನ್ನ ಹೊರತಾಗಿ ಬೇರೆಗತಿ ಯಾರು?

ಆತ್ಮೀಯ ಸಜ್ಜನರಿಂದ ಪರಿತ್ಯಜಿಸಲ್ಪಟ್ಟವಳು. ನನ್ನ ಕೈ ಒಡಿದ ಪತಿಗಳು ಭೋಗ್ಯ ವಸ್ತುವಿನಂತೆ ನನ್ನನ್ನು ದ್ಯೂತ್ಯದಲ್ಲಿ ಪಣವಾಗಿಟ್ಟು ಸೋತರು. ಹಸ್ತಿನಾವತಿಯ ರಾಜಸಭೆಯಲ್ಲಿ ಸರ್ವರ ಮುಂದೆ ದುಶ್ಯಾಸನಿಂದ ಅಪಮಾನಿತಳಾದೆನು! ರಾಜ್ಯವನ್ನು ತ್ಯಾಗ ಮಾಡಿ ಆನಾಥ ಬಿಕ್ಷುಗಳಂತೆ ಕಾಡಿನಿಂದ ಕಾಡಿಗೆ ಅಲೆದಾಯಿತು. ಕದ್ದ ಕಳ್ಳನಂತೆ ತಲೆಮರೆಸಿಕೊಂಡು. ಕೀಚಕನ ಭಂಗವನ್ನು ಸಹಿಸಿಕೊಂಡೆನು. ಇನ್ನು ನನ್ನ ಕಷ್ಟಗಳು ಕಳೆದುವೆಂದು ತಿಳಿದರೆ. ಕೊನೆ ಗಳಿಗೆಯಲ್ಲಿ ಎರಡು ದಿನಗಳಾದರೂ ಸುಖವಾಗಿರುವೆನೆಂದು ಭಾವಿಸಿದರೆ. ಹೆಜ್ಜೆ ಹೆಜ್ಜೆಗೂ ಅಪಮಾನ. ಛೆ! ವಿದಾತಾ! ದ್ರೌಪದಿಯ ಹಣೆಯಲ್ಲಿ ಇನ್ನೂ ಏನೇನನ್ನು ಬರೆದಿರುವೆ?" ಎಂದು ಚಿಂತಿಸುತ್ತಾ ನಿಲ್ಲುವಳು

ಮೇಲಿನ ಸಂಭಾಷಣೆಯಿಂದ ಪುರಾಣ ಪಾತ್ರದ ದ್ರೌಪದಿಯು ಆಧುನಿಕ ಕಾಲದ ಒಬ್ಬ ಸಾಮಾನ್ಯ ಮಹಿಳೆಯಂತೆ ಕೊರಗುವ ಬಗೆಯನ್ನು ನೋಡಬಹುದಾಗಿದೆ. ಯಾವ ರೀತಿ ಈ ಕಾಲದ ಮಹಿಳೆಯರು ಕಷ್ಟಗಳು ಬಂದಾಗ ದೇವರಲ್ಲಿ ಮೊರೆಯಿಡುತ್ತಾಳೂ ಅದೇ ರೀತಿ ದ್ರೌಪದಿಯು ತನ್ನ ಇಂದಿನ ಕಷ್ಟಗಳನ್ನು ಹೇಳಿ ಕೊಳ್ಳುತ್ತಾ ಶ್ರೀ ಕೃಷ್ಣನಲ್ಲಿ ಮೊರೆಯಿಡುತ್ತಾ ಕಡೆಗಳಿಗೆಯಾಲ್ಲಾರೂ ಸುಖವಿರ ಬಹುದು ಎಂಬ ನಂಬಿಕೆಯಿದ್ದರೂ ಹೆಜ್ಜೆ ಹೆಜ್ಜೆಗೂ ಅವಮಾನ ಅನುಭವಿಸುತ್ತಾ, ಇನ್ನೂ ವಿಧಾತನು ತನ್ನ ಹಣ್ಣೆಯಲ್ಲಿ ಏನೇನನ್ನು ಬರೆದಿರುವೆನೂ! ಎಂದು ಹೇಳುವ ಮಾತು ಈ ಕಾಲದ ಸಾಮಾನ್ಯ ಮಹಿಳೆಯ ಮಾತಾಗಿರುವುದು. ಚಿಂತಾಮಗ್ನಳಾಗಿ ನಿಂತಿರುವ ದ್ರೌಪದಿಯನ್ನು ಕಂಡು ಭೀಮನು ಹೀಗೆ ನಿಷ್ಕಾರಣವಾಗಿ ಅಳುತ್ತಿರುವೆ ಏಕೆ? ಎಂದು ದ್ರೌಪದಿಗೆ ಕೇಳಿದಾಗ ದ್ರೌಪದಿ "ನಾನು ನಿಷ್ಕಾರಣವಾಗಿ ಅಳುತ್ತಿಲ್ಲ, ಪಾಂಚಾಲಿಯ ಅಳುವಿಗೆ ಒಂದಲ್ಲ ಹತ್ತು ಕಾರಣಗಳಿರುವುದು. ನೀವು ಗಂಡಸರು ಯಾರಾದರೂ ನಿಮಗೆ ಅಪಮಾನಮಾಡಿದರೆ ನೀವು ಅವರಿಗೆ ಪ್ರತಿಕಾರ ಮಾಡುವಿರಾ! ಆದರೆ ಹೆಣ್ಣಿನ ವಿಚಾರ ಹಾಗಲ್ಲ, ಅನ್ನ, ವಸ್ತ್ರಗಳಿಗಾಗಿ ಅವಳು ಪರರನ್ನು ಆಶ್ರಯಿಸಬೇಕು"(*4) ದ್ರೌಪದಿಯ ಈ ಮಾತುಗಳು ಸ್ತ್ರೀ ಪರಾವಲಂಬಿಯಾಗಿ ಪ್ರತಿಕಾರ ತೀರಿಸಿಕೊಳ್ಳವ ಅಬಲೆ ಎಂಬುದು ಸೂಚಿಸುತ್ತದೆ.

ಸಾಮಾನ್ಯ ಮಹಿಳೆ ತಮ್ಮ ಗಂಡಂದಿರೊಡನೆ ಆಡುವ ಮಾತುಗಳನ್ನೇ ದ್ರೌಪದಿಯ ಬಾಯಲ್ಲಿ ನಾಟಕಕಾರರು ಆಡಿಸುತ್ತಾರೆ. ಹೆಣ್ಣಿನ ಆಳುವಿಗೆ ಅನೇಕ ಕಾರಣಗಳಿರುತ್ತವೆ ಎಂಬುದನ್ನು ನಾಟಕಕಾರರು ತಿಳಿಸುತ್ತಾ ಗಂಡಸರು ಪ್ರತಿಕಾರ ತೀರಿಸಿಕೊಳ್ಳಲು ಸಬಲರಾಗಿದ್ದು, ಹೆಂಗಸರು ಪ್ರತಿಕಾರ ತೀರಿಸಿಕೊಳ್ಳದ ಅಬಲೆಯರು, ಎಂಬುದಾಗಿ ಹೇಳಲಾಗಿದೆ.

(*4. ಬಿ.ಪುಟ್ಟ ಸ್ವಾಮಯ್ಯ 'ಕುರುಕ್ಷೇತ್ರ' ಪು. ಸ.145-150)

ಈ ನಾಟಕದಲ್ಲಿ ಭಾನುಮತಿ ಮತ್ತು ದ್ರೌಪದಿಯ ಒಂದು ಪ್ರಸಂಗದಲ್ಲಿ ಹೆಣ್ಣಿಗೆ ಹೆಣ್ಣೇ ವೈರಿ ಎಂಬುದಕ್ಕೆ ಒಂದು ನಿದರ್ಶವನ್ನು ನಿರೂಪಿಸಿದ್ದಾರೆ. ಅವರ ಸಂಭಾಷಣೆಯ ಈ ರೀತಿ ಇದೆ ಭಾನುಮತಿಯು ದ್ರೌಪದಿಯನ್ನು ನೋಡಿ "ನಿನ್ನ ಪತಿಗಳು ವಾಸಕ್ಕಾಗಿ ಐದು ಗ್ರಾಮಗಳನ್ನು ಬೇಡಲು ದೂತನನ್ನು ಆಸ್ಥಾನಕ್ಕೆ ಕಳುಹಿಸಿದ್ದರು. ಇನ್ನೇನು ಸಂಧಿಯಾಗುವುದು, ಇಲ್ಲವೆ ಈ ನಿನ್ನ ಕೇಶರಾಶಿ ಬಿಚ್ಚಿದ್ದನ್ನು ಮುಡಿಗಟ್ಟುವಿಯಷ್ಟೇ" ಅದಕ್ಕೆ ದ್ರೌಪದಿ ಭಾನುಮತಿ ಮುಡಿಯನ್ನು ಜಿಡಿಸುವವರೆಗೂ ತನ್ನ ಮುಡಿಯನ್ನು ಕಟ್ಟುವುದಿಲ್ಲ ಎಂದು ಶಪಥ ಮಾಡುತ್ತಾಳೆ.ಈ ಕಾಲದ ಸಾಮಾನ್ಯ ಮಹಿಳೆ ತನಗಾದ ಅನ್ಯಾಯ ಅಪಮಾನಗಳನ್ನು ಮತ್ತೋಬ್ಬ ಹೆಣ್ಣಿನ ಮುಂದೆ ಹೇಳಿ ಕೊಳ್ಳುವ ರೀತಿಯದ್ದೆ ಆಗಿದೆ. ಇದಲ್ಲದೆ ಆ ಹೆಣ್ಣಿನ ಕಡೆಯವರಿಂದ ತನಗಾದ ಮೋಸವನ್ನು ಹೆಣ್ಣಿನಲ್ಲಿ ವ್ಯಕ್ತಪಡಿಸುತ್ತಾಳೆ.

"ಸುಭದ್ರೆ ನನ್ನ ಪ್ರೇಮದ ಗಂಭೀರತೆಯನ್ನು ನೀನು ತಿಳಿಯಾಲಾರೆ, ನಿದ್ರೆಯಲ್ಲಿ ಎಚ್ಚರದಲ್ಲಿ ಒಳಗೆ ಹೊರಗೆ ಸದಾ ಸರ್ವದಾ ನಾನು ಪಾರ್ಥನನ್ನು ನೋಡುತ್ತಿರುವೇನು. ನನ್ನ ಕಣ್ಣುಗಳ ಫಲಕದಲ್ಲಿ ಕಪೋಲಗಳ ಮಾರ್ದವದಲ್ಲಿ ತುಟಿಗಳ ಸ್ಪರ್ಶದಲ್ಲಿ  ಅವನ ಪ್ರೇಮ ನಿರಂಕುಶವಾಗಿ ನೆಲೆಸಿರುವುದು. ನಾನವನ ಪತ್ನಿ ಮಾತ್ರಳಲ್ಲ, ಪ್ರೇಯಸಿ, ವೇಶ್ಯೆ, ಕ್ರೀತದಾಸಿ"(*5) ಈ ರೀತಿಯಾಗಿ ದ್ರೌಪದಿಯಿಂದಲೇ ನುಡಿಸಿರುವ ಮಾತುಗಳಿಗೆ ಮಹಾಭಾರತದ ಕಾಲದಲ್ಲಿ ಬಹುಪತಿತ್ವಕ್ಕೆ  ಸಾಂಸ್ಕೃತಿಕವಾಗಿ ಮನ್ನಣೆಯಿತ್ತೆಂಬ ಸಂಗತಿ ಹೊಳೆದಿರ ಬೇಕಿತ್ತು. ದ್ರೌಪದಿ ಪಂಚಪಾಂಡವರಿಗೆ ಮನಃಪೂರ್ವಕವಾಗಿ ಪತ್ನಿಯಾಗಲಿಲ್ಲವೆಂದು ಆದರೆ ಅಂತರ್ಯದಲ್ಲಿ ಅವಳು ಅರ್ಜುನನೊಬ್ಬನನ್ನೇ ಅವಳ ಪತಿ ಎಂಬುದನ್ನು ತಿಳಿದ್ದಿದಳು.

ನಿರ್ದಿಷ್ಟ ದೇಶ, ಕಾಲಕ್ಕೆ ಸೇರಿದ ಸಾಮಾಜಿಕ ಸಂಬಂಧವನ್ನು ಕುರಿತ ನಂಬಿಕೆ, ಪದ್ಧತಿಗಳನ್ನು ಗೌರವಯುತವಾಗಿ ಕಾಣುವುದಿದ್ದರೆ ಅವುಗಳನ್ನು ಮಾರ್ಪಡಿಸಿ ಚಿತ್ರಿಸುವ ಅಗತ್ಯವೇ ಬೀಳುವುದಿಲ್ಲ. ಮಹಾಭಾರತದಲ್ಲಿ ಚಿತ್ರಿತವಾಗಿರುವ ದ್ರೌಪದಿಯ ಸಂಕೀರ್ಣ ವ್ಯಕ್ತಿತ್ವದ ಒಂದು ಭಾಗ ಮಾತ್ರ ಶೃಂಗಾರಕ್ಕೆ ಆಸ್ಪದವೀಯವಂತಹುದು.

ಪಂಚಪಾಂಡವರ ಸತಿಯಾಗಿದ್ದ ದ್ರೌಪದಿ, ಭಕ್ತಿಯ ನೆಲೆಯಲ್ಲಿ ಕೃಷ್ಣನನ್ನೂ ಆಕರ್ಷಿಸಿದವಳು ಎಂಬ ಉದಾತ್ತಪ್ರೇಮದ ಕಲ್ಪನೆಯೊಂದನ್ನು ನಮ್ಮ ಪರಂಪರೆ ದ್ರೌಪದಿಯಲ್ಲಿ ಕಂಡುಕೊಂಡಿದೆ. ದ್ರೌಪದಿಯನ್ನು ಅರ್ಜುನನ ಖಾಸಾ ಪ್ರೇಮಿಯನ್ನಾಗಿಸುವುದರಿಂದ ಮೂಲ ಕಥೆಯ ಸಾಂಕೇತಿಕತೆಗೆ ಧಕ್ಕೆ ಬಂದಿದೆ. ಅರ್ಜುನನಲ್ಲಿ ಮನಸ್ಸಿಟ್ಟು ದೇಹವನ್ನು ಅನಿವಾರ್ಯವಾಗಿ ಐವರಿಗೂ ಒಪ್ಪಿಸಿದಳೆಂಬ ನಾಟಕಕಾರರ ಕಲ್ಪನೆಯಿಂದಾಗಿ ಅವಳ ವ್ಯಕ್ತಿತ್ವಕ್ಕೆ ವ್ಯಭಿಚಾರದ ಅವನತಿ ಪ್ರಾಪ್ತವಾಗುತ್ತದೆ.

(.*5 ಬಿ.ಪುಟ್ಟ ಸ್ವಾಮಯ್ಯ 'ಕುರುಕ್ಷೇತ್ರ' ಪು. ಸ.145–150)

## ಅಧ್ಯಾಯ 5

## ಕಾವ್ಯಗಳಲ್ಲಿನ ದ್ರೌಪದಿ

ಸುಮಾರು ಎಂಬತ್ತು ವರ್ಷಗಳಿಗೂ ಹೆಚ್ಚಿನ ಕಾಲದ ವಿಸ್ತೃತ ಪರಂಪರೆಯನ್ನು ಹೊಂದಿರುವ ಆಧುನಿಕ ಕನ್ನಡ ಸಾಹಿತ್ಯ ಹಲವು ಪ್ರಕಾರಗಳನ್ನು ರೂಪಿಸಿದೆ. ಅಂತಹ ಪರಂಪರೆಯಲ್ಲಿ ಆಧುನಿಕ ಕಾವ್ಯ ಒಂದು ಮಹತ್ವದ ಪ್ರಕಾರ. ಕಾವ್ಯ ಪರಂಪರೆಯಲ್ಲಿ ಆಧುನಿಕ ಸಾಹಿತಿಗಳು ತಮ್ಮ ಸೃಜನಶೀಲ ಪ್ರತಿಭೆಯಿಂದ ಆಳವಾದ ಅಧ್ಯಯನ ಮತ್ತು ಕ್ರಿಯಾಶೀಲತೆಯಿಂದ ಸಾಹಿತ್ಯಾ ಸಂದರ್ಭಕ್ಕೆ ಹೊಸ ಮೈಲಿಗಲುಗಳನ್ನು ಸೃಷ್ಟಿಸಿದ್ದಾರೆ. ಹೀಗೆ ಕನ್ನಡ ಕಾವ್ಯ ಕೃಷಿಯಲ್ಲಿ ಆಧುನಿಕ ಸಾಹಿತ್ಯ ಕಾಲದ ಬದಲಾವಣೆಯ ಅರಿವಿನೊಂದಿಗೆ ಹಾಗೂ ಗಂಭೀರವಾದ ಚಿಂತನೆಯೊಂದಿಗೆ ಕಾವ್ಯ ಚಲಿಸಬೇಕಾದ ನೆಲೆಯನ್ನು ಗ್ರಹಿಸಲಾಗಿದೆ.

ಈ ಆಧುನಿಕ ಸಾಹಿತ್ಯದ ಯುಗದಲ್ಲಿ ನವೋದಯ ಸಾಹಿತಿಗಳು ಕಥೆ, ಪ್ರಬಂಧ, ವಿರ್ಮಶೆಯನ್ನು ಕಾವ್ಯಗಳಲ್ಲಿ ಆಧುನಿಕತೆ ಕಂಡಿತ್ತು. ಎಷ್ಟೇ ಆಧುನಿಕತೆ ಕಂಡರೂ ಮಹಾಭಾರತದ ಪ್ರಭಾವದಿಂದ ಈ ಸಾಹಿತ್ಯ ಯುಗವು ತಪ್ಪಿಸಿಕೊಳ್ಳಲಾಗಲಿಲ್ಲ. ಒಂದಲ್ಲ ಒಂದು ರೀತಿಯಲ್ಲಿ ಆಧುನಿಕ ಕಥೆಗಳಲ್ಲಿ, ಕಾದಂಬರಿಯಲ್ಲಿ, ವಿಮರ್ಶೆಯಲ್ಲಿ, ಕಾವ್ಯಗಳಲ್ಲಿ, ಲೇಖನಗಳಲ್ಲಿ ಮಹಾಭಾರತದ ವಸ್ತು, ವಿಷಯವನ್ನು ಹಾಗೂ ವ್ಯಕ್ತಿಗಳ ಪಾತ್ರಗಳುನ್ನು ತಮ್ಮ ಕಾವ್ಯಗಲ್ಲಿ ರಚಿಸಿದ್ದಾರೆ. ಹೀಗೆ ಮಹಾಭಾರತದ ಕಥೆಯನ್ನು ಕನ್ನಡ ಸಾಹಿತ್ಯದ ಘಟ್ಟಗಳಾದ ನವ್ಯ, ನವೋದಯ ಹಾಗೂ ಬಂಡಾಯಸಾಹಿತ್ಯಕ್ಕೆ ಹೇಗೆ ಅಳವಡಿಸಿಕೊಂಡಿದ್ದಾರೆ. ಎಂಬುದನ್ನು ನನ್ನ ನಿಬಂಧನಕ್ಕೆ ಹಲವು ಲೇಖಕಿಯರು ಬರೆದಿರುವ ಕಾವ್ಯವನ್ನು ಆಧರಿಸಿ ವಿಶ್ಲೇಷಿಸಿದ್ದಾರೆ.

ಸ್ತ್ರೀ ಸಂವೇದನೆಯು ಸಾಹಿತ್ಯದ ಕೊಡುಗೆ. ಕನ್ನಡ ಸಾಹಿತ್ಯಕ್ಕೆ ಗರಿ ಮೂಡಿಸಿದೆ. ಕಳೆದ ಶತಮಾನದಿಂದಲೂ ಕಾವ್ಯ ರಚನೆಯಲ್ಲಿ ಕೆಲವು ಲೇಖಕಿಯರು ಉತ್ತಮೋತ್ತಮ ಕವಿತೆಗಳನ್ನು ರಚಿಸಿದ್ದಾರೆ. ಅದರಲೂ ಪೌರಾಣಿಕ ಕಾವ್ಯವನ್ನು ಇಂದಿನ ಆಧುನಿಕ ಕಾವ್ಯಕ್ಕೆ ಮಹಿಳೆಯರು ಯಾವ ರೀತಿ ಬರೆಯುತ್ತಿದ್ದಾರೆ ಎಂಬುದು ಕುತೂಹಲಕರವಾದ ವಿಷಯವಾಗಿದೆ. ಪುರಾಣ ಇತಿಹಾಸಗಳಲ್ಲಿ ಪುರುಷ ಪ್ರಧಾನತೆಯನ್ನು ಧಿಕ್ಕರಿಸಿ ನಡೆದ ಸ್ತ್ರೀಯರ ಬಗ್ಗೆ ಮಹಿಳಾ ಕವಿಗಳು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಪುರಾಣದ ಕಥೆಗಳಲ್ಲಿ ಸ್ತ್ರೀ ಯಾವ ರೀತಿ ಶೋಷಣೆಗಳಿಗೆ ಒಳಗಾಗಿದ್ದಾಳೆ, ಹಾಗೂ ಅವಳ ವೇದನೆ, ದುಃಖ, ನೋವುಗಳು ತನ್ನಲೆ ಅಡಗಿಸಿಕೊಂಡರೂ ಯಾವುದೇ ಪ್ರತಿಭಟನೆಯನ್ನು ನೆಡೆಸುವುದಿಲ್ಲ. ಹೆಣ್ಣಿನ ತಾಳ್ಮೆ ಮೀತಿಮಿರಿದಾಗ ಪ್ರತಿಭಟಸುತ್ತಾಳೆ. ಹಾಗೆಯೇ ಮಹಾಭಾರತದಲ್ಲಿ ದ್ರೌಪದಿಯ ಸಹ ತಾಳ್ಮೆಯು ಮಿತಿಮೀರಿದಾಗ ಮಾತ್ರ ಪ್ರತಿಭಟಿಸುವಳು. ಅವಳಲ್ಲಿರುವ ಛಲ. ರೋಷ, ಆವೇಶಗಳನ್ನು ನಮ್ಮ ಆಧುನಿಕ

ಲೇಖಕಿಯರು ತಮ್ಮ ಆಧುನಿಕ ಕಾವ್ಯಗಳಲ್ಲಿ ಹೇಗೆ ಅಳವಡಿಸಿಕೊಂಡಿದ್ದಾರೆ. ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ.

'ದ್ರೌಪದಿಯ ಸ್ವಗತ' ಕವಿತೆಯಲ್ಲಿ ಮಂಜುಳಾ ಶೆಟ್ಟಿಯವರು ದ್ರೌಪದಿಯ ನೋವು, ಅವಳ ಪ್ರತಿಭಟನೆಯ ಜೊತೆಗೆ ರೋಷ, ಆವೇಶಗಳಿಂದ ತನ್ನ ಗಂಡಂದಿರನ್ನು ವ್ಯಂಗ್ಯದ ಮಾತುಗಳಿಂದ ಹೀಗೆ ನಿರೂಪಿಸದ್ದಾರೆ.

<u>ದ್ರೌಪದಿಯ ಸ್ವಗತ</u>

ಧರೆಯೊಳಗೆ ಹೆಸರಾಂತ
ವೀರ ದ್ರುಪದನ ಏಕಮಾತ್ರ ಪುತ್ರಿಯಾಗಿ
ಜಗದೇಕವೀರ ದೃಷ್ಟದ್ಯುಮ್ನನಿಗೆ ಮುದ್ದಿನ ಅನುಜೆಯಾಗಿ
ಛಲವಂತೆಯೆಂದು–ಸಿಂಹಿಣಿಯೆಂದು

ಮಹಾಭಾರತದಲ್ಲಿ ಹೆಸರನ್ನು ಗಳಿಸಿದವರೂ ಎಷ್ಟು ಮಂದಿ ಇದ್ದರೂ, ಅಷ್ಟೇ ಮಂದಿ ಕೆಟ್ಟ ಹೆಸರನ್ನು ಪಡೆದವರು ಇರುವವರೂ, ದ್ರುಪದನು ರಾಜನಾಗಿ ಈ ಭೂಮಿಯಲ್ಲಿ ಹುಟ್ಟಿದರೂ, ಅವನಲ್ಲಿ ಇರುವ ಗುಣ ಕೆಟ್ಟದ್ದು. ಛಲಕ್ಕಾಗಿ ಸೇಡನ್ನು ತೀರಿಸಿ ಕೊಳ್ಳಲು ದ್ರುಪದರಾಜನು ಸೇಡಿಗಾಗಿಯೇ ಪುತ್ರಿಯನ್ನ ಪಡೆಯುತ್ತಾನೆ. ಹಾಗಯೇ ಪುತ್ರನಾದ ದೃಷ್ಟದುಮ್ನನನ್ನು ಪಡೆಯುತ್ತಾನೆ. ಪುತ್ರಿಯು ದೃಷ್ಟದುಮ್ನನ ತಂಗಿಯಾಗಿ ಛಲವಂತೆಯಾಗಿ, ರೋಷ, ಆವೇಶಗಳನ್ನು ಪಡೆದವಳು.

ತ್ರೀಲೋಕ ಸುಂದರಿಯೆಂದು ಮೆರದವಳು
ಷೋಡಶಿಯಾಗುವುದೇ ತಡ
ಛಲದಂಕಮಲ್ಲನೆಂದು, ಲೋಕಾಧಿವೀರನೆಂದು
ಪಾರ್ಥನನ್ನು ಸ್ವಯಂವರದಲ್ಲಿ ವರಿಸಿ ಬೀಗಿದ್ದವಳು---------
ಒಬ್ಬ ಗೆದ್ದರೆ ಹಂಚಿಕೊಂಡವರು ಐವರು ತನಗೆಲ್ಲಿಯ ಸ್ವಂತಿಕೆ ?

ಕಪ್ಪು ಬಣ್ಣವನ್ನು ಪಡೆದ ಇವಳು ಮೂರು ಲೋಕಕ್ಕೆ ಸುಂದರಿಯೆಂದು ಮರೆದವಳು. ಹೆಣ್ಣು ಮನೆಯಲ್ಲಿ ವಯಸ್ಸಿಗೆ ಬರುವುದೇ ತಡ ತಂದೆ ತಾಯಿಗೆ ಚಿಂತೆಯಾಗುವುದು, ಜೊತೆಗೆ ಭಾರವಾಗಿಯು ಇರುವುದು. ಅದಕ್ಕೆ ನಮ್ಮ ಹಿಂದಿನ ಪೂರ್ವಜರು ಹೆಣ್ಣು ದೊಡ್ಡವಳಾದಳು ಎಂದ ಕೂಡಲೇ ಮದುವೆ ಮಾಡಿ ಬಿಡುತ್ತಿದ್ದರು. ಹಾಗೆಯೇ ಇಲ್ಲಿಯು ಸಹ ದ್ರೌಪದಿಯು ವಯಸ್ಸಿಗೆ ಬಂದ ತಕ್ಷಣವೇ ಮದುವೇಯ ಸಿದ್ದತೆ, ಸಿದ್ದತೆಯ ಜೊತೆಗೆ, ದ್ರುಪದನಿಗೆ ತನ್ನ ಸೇಡನ್ನು ದ್ರೋಣನ ಮೇಲೆ, ಅದಕ್ಕೆ ದ್ರೌಪದಿಯನ್ನು

ಅರ್ಜುನನಿಗೆ ಕೊಟ್ಟು ಮದುವೆ ಮಾಡುವನು. ದ್ರೌಪದಿಯ ಹಣೆಬರಹ ಒಬ್ಬನನ್ನು ಪಡೆಯಲು ಹೋಗಿ ಐದು ಪತಿಯರುಗಳನ್ನು ಪಡೆಯಬೇಕಾಯಿತ್ತು.

ಈಗಿನ ಸಮಾಜದಲ್ಲಿ ಒಬ್ಬನ ಜೊತೆ ಸಂಸಾರ ಮಾಡಲು ಕಷ್ಟವಾಗಿರುವಾಗ, ದ್ರೌಪದಿ ಐವರ ಜೊತೆ ಸಂಸಾರ ಮಾಡಬೇಕಾದ ಪರಿಸ್ಥಿತಿ ಬಂದಾಗ ಅವಳ ನೋವು ಹಂಚಿಕೊಳ್ಳಲು ಯಾರೂ ಇಲ್ಲವಾದಗ ಮನಸ್ಸಿನಲೆ ಯಾತನೆ ಪಡುವಳು.

ಗಂಡದೆಯ ಚೆಲುವನನ್ನು,
ಆ ಧೀರ ಕರ್ಣನನ್ನು
ಸೂತ ಪುತ್ರನೆಂದು ಏಕೆ ಹೇಳಿದೆನೋ
ಯಾಕೆ ಕುರುಡಾಗಿ ಒಲ್ಲೆನೆಂದನೋ
ಅವನ ಧೀಮಂತಿಕೆ ಈ ಗಾಂಡೀವಿಗೆಲ್ಲಿ?

ಚಲುವಿನಲ್ಲಿ, ಗುಣದಲ್ಲಿ, ಧೈರ್ಯದಲ್ಲಿ, ಎಲ್ಲದರಲ್ಲಿಯೂ ವಿಜಯಶಾಲಿಯಾದ ಕರ್ಣನನ್ನು ಜಾತಿಯ ಮಾತಿಗೆ ಒಲ್ಲೇ ಎಂದೆನ್ನೇಲ್ಲ! ಇವನೋಬ್ಬನಿಗಿರುವ ಧೀಮಂತಿಕೆ ಅ ಅರ್ಜುನನಿಗೆಲ್ಲಿ? ದ್ರೌಪದಿಯ ವ್ಯಂಗ್ಯದ ಮಾತಿನ ಮೂಲಕ ಸ್ಪಷ್ಟಪಡಿಸುತ್ತಾ ಕರ್ಣನ ಮೇಲಿನ ಆಸೆ ವ್ಯಕ್ತಪಡಿಸುವ ದ್ರೌಪದಿ ಆದುನಿಕ ಮಹಿಳೆಯನ್ನು ಪ್ರತಿಬಿಂಬಿಸುತ್ತಾಳೆ.

ರಾಜಸಭೆಯಲ್ಲಿ ದುರುಳ ಕೀಚಕ
ಮುಡಿ ಹಿಡಿದು ಜಡೆಯಾಡಿಸಿದಾಗಲೂ
ಮೂಕ ಪ್ರೇಕ್ಷಕನಾದ ಧರ್ಮಜನ ಧರ್ಮಕ್ಕೆ ಧೀಕ್ಕಾರವಿರಲಿ!
ತೆರದ ಸಭೆಯೆದುರು ಸತಿಯ ಸೆರಗು
ಜಾರುವಾಗ ಅಬಲೆ ಮುಡಿಗೆದರಿ ಕೊಂಡು ಮೊರೆಯಿಡುವಾಗ
ಬಾಲ ಮುದುರಿದ ಗ್ರಾಮಸಿಂಗರಾದ
ಈ ಷಂಡರು-------ತನ್ನ ಗಂಡಂದಿರು!

ಇಲ್ಲಿ ಕಾಮದ ನೆಲೆಯಲ್ಲಿ ಹೆಣ್ಣನ್ನು ಶೋಷಿಸುತ್ತಿರುವವರ ವಿರುದ್ಧ ಅಸಮಾಧಾನದ ದನಿ ಇದೆ. ಈ ರೀತಿಯ ದನಿಯಲ್ಲಿಯೇ ಪುರಾಣದ ಕಾವ್ಯಗಳ ಸ್ತ್ರೀಯರ ಮೂಲಕವೇ ಅಸಹಾಯಕತೆಯನ್ನು ವ್ಯಕ್ತ ಪಡಿಸುವ ಸಂದರ್ಭದಲ್ಲಿ ಒಟ್ಟು ವ್ಯವಸ್ಥೆಯ ಬಗ್ಗೆ ಜಿಗುಪ್ಸೆಗೊಂಡು ಹತಾಶೆ ಹೊಂದಿರುವ ಕವಯತ್ರಿ ನೋವಿನ ಮೂಲಕ ವ್ಯಕ್ತ ಪಡಿಸಿದ್ದಾರೆ.

ಇಷ್ಟೇಲ್ಲಾ ವನವಾಸದಲ್ಲಿ ನೋವು ತಿನ್ನುವಾಗ, ಅಜ್ಞಾತವಾಸದಲ್ಲಿ ಕಾಮುಕ ಕೀಚಕನಿಂದ ಹಿಂಸೆ ಅವಮಾನ, ತುಂಬಿದ ಸಭೆಯಲ್ಲಿ ಎಲ್ಲಾರ ಎದುರೂ ಕೀಚಕ ಜಡೆಯನ್ನು ಹಿಡಿದು ಹೊಡೆದಾಗ, ಮೌನವಾಗಿ ಕುಳಿತಿದ್ದರಲ್ಲಾ ನನ್ನ ಪತಿಯರೇ ಇವರು? ಅದರಲೂ ಧರ್ಮರಾಯ ಧರ್ಮ ಧರ್ಮ ಇವನ ಧರ್ಮ ನನ್ನನು ಕಾಪಡಿತೆ? ಇವನ ಧರ್ಮಕ್ಕೆ ನನ್ನ ಧಿಕ್ಕಾರ? ಹೆಣ್ಣಿನ ಮಾನವನ್ನು ಕಾಪಡಲು ಆಗದವರೂ ಇವರೆಂತಹ ಗಂಡದಿರು, ಇವರೆಲ್ಲಾ ಬಾಲ ಮುದುರಿದ ನಾಯಿಗಳು. ಹೆಣ್ಣನ್ನು ಮದುವೆಯಾದ ಗಂಡು ಎಷ್ಟು ಜೊಪಾನವಾಗಿ ಕಾಪಾಡುವರು, ಆದರೆ ಇವರಿಗೆ ನನ್ನ ಕೂಗೂ ಕೇಳಿಸಲಿಲ್ಲವೇ? ದುಃಖದ ನೋವಿಗೆ ಬಾಗಿಯಾಗದ ಗಂಡರದಿರೇತಕ್ಕೆ? ತುಂಬಿದ ಸಭೆಯಲ್ಲಿ ಸ್ಥಿತಪ್ರಜ್ಞರಂತೆ ತಲೆತಗ್ಗಿಸಿದ.

ಸೀರೆ ಕಳ್ಳ ಕೃಷ್ಣನಲ್ಲದಿದ್ದರೆ ತಾನು ಬೆತ್ತಲಾಗಬೇಕಿತ್ತು
ಲೋಕಮಾನ್ಯ ಪಾಂಚಾಲಿಯಾಗಲು ತಾನು
ಬಯಸಿದ್ದೇನೆ?

ಸೀರೆಯ ಸೆರಗೂ ಜಾರಿದಾಗ ನೋಡಿಕೊಂಡು ಇದ್ದಾರಲ್ಲಾ ಈ ಪುಂಡರು! ನನ್ನ ಕಷ್ಟಕ್ಕೆ ಅಂದು ಕೃಷ್ಣ ಬರದಿದ್ದರೇ ಏನಾಗುತ್ತಿತ್ತೋ! ನಾನೇನಾದರೂ ಲೋಕದಲ್ಲಿ ಹೆಸರು ಪಡೆಯಲೂ ಇವರನ್ನ ಬಯಸಿದೇನೆಯೇ? ದ್ರೌಪದಿಯ ಅಂತರಾಳದ ಮಾತುಗಳು ಇಲ್ಲಿ ವ್ಯಕ್ತವಾಗಿದೆ. ಗಂಡಸಿನ ಬೇಜವಾಬ್ದಾರಿತನ ಮತ್ತು ದುರಹಂಕಾರಗಳು ಹೆಣ್ಣಿನ ಬದುಕನ್ನು ಅಸಹನೀಯಗೊಳಿಸುತ್ತಲೇ ಇವೆ. ಹೆಣ್ಣು ಯಾವುದೇ ಧರ್ಮವದಳಿರಲಿ, ಜಾತಿಯವಳಿರಲಿ, ದೇಶದವಳಿರಲಿ ಹೆಣ್ಣು ಹೆಣ್ಣೇ ಎಂಬುದುನ್ನು ಅರಿಯಲು ಬಹಳ ಸಮಯ ಬೇಕಿಲ್ಲ. ಗಂಡಿನ ಧಿಮಾಕು ಮತ್ತು ಹೆಣ್ಣಿನ ನೋವು ಸಹಸ್ರಾರು ವರ್ಷಗಳಿಂದ ಜೊತೆ ಜೊತೆಯಾಗಿ ಸಾಗಿದ್ದು ಬದುಕಿನ ಅಸಹ್ಯ ಅನಿವಾರ್ಯತೆಗಳಲೊಂದಾಗಿದೆ. ಅದಕ್ಕೆ ಹೆಣ್ಣು ಹೆಚ್ಚು ಜಾಗೃತಳಾಗಬೇಕೆಂಬ ಎಚ್ಚರಿಕೆಯ ಮಾತುಗಳು ಈ ಕವನದಲ್ಲಿ ಮೂಡಿಬಂದಿವೆ.

ಅಂದು ಪಾಂಚಲಿಯ ಸಿಟ್ಟು ಮಹಾಭಾರತ ಯುದ್ಧಕ್ಕೆ ಪುಷ್ಟಿ ನೀಡಿತು. ಸಿಟ್ಟಿನ ಬದಲಿಗೆ ತನ್ನ ಅಸ್ತಿತ್ವಕ್ಕಾಗಿ ದ್ರೌಪದಿ ಹುಡುಕಾಟ ಪ್ರಾರಂಭಿಸಿದ್ದರೆ ಮಹಾಭಾರತದ ಕಥೆಯೇ ಬೇರೆಯಾಗುತ್ತಿತ್ತು. ಹೆಣ್ಣು ತನಗಾಗುತ್ತಿರುವ ಅಪಮಾನದ ಮೂಲಗಳನ್ನು ಹುಡುಕಬೇಕಿದೆ. ದ್ರೌಪದಿಯ ತಾನು ಸ್ವತಂತ್ರಳು ಎಂಬುದಕ್ಕೆ ಅವಳಲ್ಲಿ ಯಾವ ನಿರ್ಧಾರವು ಇರಲಿಲ್ಲ.. ಇಲ್ಲಿ ಹೆಣ್ಣಿನ ಹಕ್ಕು ಇಲ್ಲವಾಗುತ್ತದೆ. ಕಷ್ಟಗಳಿಗೆ ಸಿಲುಕುತ್ತಾಳೆ. ತನ್ನ ಗಂಡಂದಿರಲ್ಲಿ ಯಾವುದೇ ಸುಖಸಿಗದಿದ್ದಾಗ ಪರಪುರುಷನನ್ನು ಬಯಸುವುದು ಸಹಜ. ಅದೇ ರೀತಿ ದ್ರೌಪದಿಯು ಕರ್ಣನನ್ನು ಇಷ್ಟಪಟ್ಟಿದ್ದಳು ಅಷ್ಟೇ! ಅದಕ್ಕೆ ಈ ಸಮಾಜ ಅವಳನ್ನು ಯಾವ ದೃಷ್ಟಿಯಿಂದ ನೋಡತೋ? ಇಂದಿನ ಮಹಿಳೆಯರನ್ನು ಅದೇ ದೃಷ್ಟಿಯಿಂದಲೇ ಈಗಲೂ ಸಹ ನೋಡುತ್ತಾ ಇದೆ.

ದ್ರೌಪದಿ ಐವರ ಜೊತೆ ಸಂಸಾರ ನೆಡೆಸಲು ಮುಂದಾಗುತ್ತಾಳೆ. ಅದೇ ಐವರು ಇವಳನ್ನು ಜೂಜಿನ ವಸ್ತುವಾಗಿ ಪಣಕ್ಕಿಟ್ಟು ಮಾರಾಟ ಮಾಡುತ್ತಾರೆ. ಇದಕ್ಕೆ ದ್ರೌಪದಿ ತನ್ನ ಗಂಡಂದಿರನ್ನು ಇವರೆಂತಹ ಪಾಪಿಗಳು! ಎಂಬ ಧೋರಣೆಯನ್ನು ಪ್ರತಿಭಟಿಸುತ್ತಾಳೆ. ಹೆಣ್ಣಿನ ಶಕ್ತಿಯು ಅದಮ್ಯವಾದುದು ಅಂತೆಯೇ ಆಕೆ ಸಹಸ್ರಾರು ವರ್ಷಗಳಿಂದ ದಬ್ಬಾಳಿಕೆಯನ್ನು ಸಹಿಸುತ್ತ ಮತ್ತು ಎದುರಿಸುತ್ತ ಮುನ್ನಡೆದಿದ್ದಾಳೆ.

ಹೀಗೆ ವಿವಿಧ ರೀತಿಯಲ್ಲಿ ನೋವು ಅನುಭವಿಸುತ್ತಿರುವ ಹೆಣ್ಣಿನ ಒಳದನಿಯಾಗಿ ದ್ರೌಪದಿಯ ಪ್ರತಿಭಟನೆಯ, ದೃಢನಿರ್ಧಾರ, ಚಿಂತನೆ, ನಿಟ್ಟುಸಿರುಗಳಿಗೆ ಮಂಜುಳಾಶೆಟ್ಟಿಯವರು ದ್ರೌಪದಿಯೊಂದಿಗೆ ಸಂವಾದ ನೆಡೆಸಿದ್ದಾರೆ.

ಬದುಕು ನೆಡೆಸುವುದು ಈಗಿನ ಕಾಲಕ್ಕೆ ಬಹಳ ಕಷ್ಟದ ಮಾತು. ಸಮಾಜದಲ್ಲಿ ಬಡವರು ಬಡವರಾಗಿಯೇ ಉಳಿಯುತ್ತಾರೆ. ಶ್ರೀಮಂತರು ಶ್ರೀಮಂತರಾಗಿಯೇ ಉಳಿಯುತ್ತಾರೆ. ಹೀಗಿರುವಾಗ ಜೀವನ ನೆಡೆಸುವುದು ಬಡವರಿಗೆ, ಮಧ್ಯಮ ವರ್ಗದವರಿಗೆ ಅಸಾಧ್ಯವಾಗಿದೆ. **ಅಕ್ಷಯ ಪಾತ್ರೆ ದ್ರೌಪದಿ** ಕವಿತೆಯಲ್ಲಿ ಮಧ್ಯಮ ವರ್ಗದ ಮಹಿಳೆಯ ಬದುಕನ್ನು ಎಸ್. ಉಷರವರು ವಿಶ್ಲೇಷಿಸಿದ್ದಾರೆ. ಅದಕ್ಕೆ ಮಧ್ಯಮ ವರ್ಗದ ಮಹಿಳೆ ದ್ರೌಪದಿಯ ಬಳಿ ಇರುವ ಅಕ್ಷಯ ಪಾತ್ರೆಯನ್ನು ಕೊಡುತ್ತಿಯಾ ಎಂದು ಈ ಕವನದ ಮೂಲಕ ಕೇಳುತ್ತಿದ್ದಾರೆ.

**ಅಕ್ಷಯ ಪಾತ್ರೆ ದ್ರೌಪದಿ**

ಕೇಳಬಾರದೆಂದೇ ಇದ್ದೆ
ನಿನ್ನ ಅಕ್ಷಯ ಪಾತ್ರೆಯ
ಕೊಡುತ್ತೀಯ ನನ್ನ ಬಳಕೆಗೆ ಕೆಲ ಕಾಲ?

ಮಧ್ಯಮ ವರ್ಗದ ಮಹಿಳೆಯು ದ್ರೌಪದಿಯನ್ನ ಸಂಕೋಚದಿಂದ ದ್ರೌಪದಿಯ ಬಳಿ ಇರುವ ಅಕ್ಷಯ ಪಾತ್ರೆಯನ್ನ ಸ್ವಲ್ಪ ದಿನ ಕಾಲ ಅವಳ ಬಳಿ ಇರಲೂ ಕೇಳುತ್ತಿದ್ದಾಳೆ. ಏಕೆಂದರೆ ಈಗಿನ ಬೆಲೆ ಏರಿಕೆಯಲ್ಲಿ ಜೀವನ ನಡೆಸಲು ಕಷ್ಟವಾಗುತ್ತಿದೆ.

ನಿನಗಿದ್ದಂತೆ
ನನಗೈದು ಗಂಡಂದಿರಿಲ್ಲ
ಕಾಡು ಅಲೆಯಬೇಕಾಗಿಲ್ಲ
ದೂರ್ವಾಸನಲ್ಲಿ ಬರುವಂತಿಲ್ಲ

ಇಲ್ಲಿ ದ್ರೌಪದಿಗೆ ಐದು ಜನ ಗಂಡಂದಿರಿದ್ದಾರೆ. ಒಬ್ಬರಲ್ಲಾ ಒಬ್ಬರೂ ದುಡಿದು ತಂದು ಹಾಕುತ್ತಾರೆ. ಆದರೆ ಈಗಿನ ಕಾಲದ ಮದ್ಯಮ ವರ್ಗದ ಮಹಿಳೆಗೆ ಒಬ್ಬನೇ ಗಂಡ. ಅವನು ದುಡಿದು ತರಬೇಕು. ಈಗಿನ ಕಾಲದಲ್ಲಿ ಗಂಡ ಹೆಂಡತಿ ಇಬ್ಬರೂ ದುಡಿದರೂ ಸಾಲದು. ಬಳಿ ದೂರ್ವಾಸರಂತಹವರೂ ಇಲ್ಲಿ ಬರುವುದಿಲ್ಲ.

ಆದರೂ
ಸಾಕಪ್ಪ ಸಾಕು ಬೇಸರವಾಗಿದೆ
ನಿನ್ನ ನಿತ್ಯದಡಿಗೆಯ ಜಂಜಾಟ
ನಿನಗರ್ಥವಾತೇ ನನ್ನದೇ ಮಿಡಿತ
ನಿನ್ನದೇ

ಆದರೂ ಜೀವನ ಸಾಕಗಿದೆ. ಪ್ರತಿ ನಿತ್ಯ ಅಡುಗೆಯ ಕೆಲಸ, ಮನೆಯ ಜವಬ್ದಾರಿ ಮಕ್ಕಳ, ಪಾಲನೆ ಪೋಷಣೆ, ಈ ಎಲ್ಲಾ ಜವಣೆಗಳಿಂದ, ಒತ್ತಡಗಳಿಂದ ಸಾಕಾಗಿದೆ. ನಿನಗರ್ಥವಾಯಿತೇ, ದ್ರೌಪದಿ ನನ್ನ ಕಷ್ಟಗಳು. ಅದಕ್ಕೆ ನಿನ್ನನ್ನು ಕೇಳುತ್ತಿರುವುದು ಅಕ್ಷಯ ಪಾತ್ರೆ!

ಕಥೆಯ ನೀನು ಓದಿದ್ದೀಯ!
ನಾನು ಓದುತ್ತ ಮೈ ಮರೆತಾಗಿ
ಒಗ್ಗುವುದು ಮನೆಯ ಜಠರಾಗ್ನಿ
ಬಿದ್ದಾಗ

ಯಾವಗಲ್ಲಾದರೂ ನಿನ್ನ ಕಥೆ ಓದಿದೆಯ. ಆದರೆ ನಾನು ಮನಸ್ಸಿಗೆ ಬೇಸರ ಕಳೆಯಲು ನಿನ್ನ ಕಥೆ ಓದುತ್ತಿರುವಾಗ, ಹಾಗೆಯೇ ಮೈ ಮರೆತೇ! ಸಾಮಾನ್ಯ ಹೆಣ್ಣಿಗೆ ಅನ್ವಯಿಸುವ ಮಾತು, ಯಾವುದೇ ಯೋಚನೆ ಇಲ್ಲದೆ ಆರಾಮಾಗಿ ಇರುವಾಗ, ಮನೆಯವರಿಗೆಲ್ಲಾ ನನ್ನ ಮೇಲೆಯೇ ಹೊಟ್ಟೆಕಿಚ್ಚು, ನಾನೇನು ಮಾಡಲಿ, ಹೊರಗಡೆ ಹೊಗಿ ದುಡಿಯಲೇ?

ಬೆಲೆಯೇರಿಕೆಯ ಬೆಂಕಿ ಬಲೆಯಲ್ಲಿ
ಅಗ್ನಿಕನ್ನೆ ನೆನಪಾಗುವುದು
ಸೂರ್ಯ ನಿನಗಿತ್ತ ಅಕ್ಷಯ ಪಾತ್ರೆ
ದ್ರೌಪದೀ

ದಿನ ನಿತ್ಯದ ಬದುಕಿಗೆ ಬೇಕಾದ, ದಿನಸಿ ಸಾಮಾನು ತೆಗೆದು ಕೊಳ್ಳಲು ಬೆಲೆ ಏರಿಕೆಯಲ್ಲಿ ಅಸಾಧ್ಯವಾದ ಮಾತು. ಆಗ ನನಗೆ ನೆನಪಿಗೆ ಬರುವುದು, ದ್ರೌಪದಿ, ನಿನ್ನ ಗಂಡಂದಿರ ಹಸುವನ್ನು ನಿಗಿಸಲು ಸೂರ್ಯ ವರವಾಗಿ ಕೊಟ್ಟನಲ್ಲ, ಅದು ನಿನ್ನ ಬಳಿ ಇರುವ ಅಕ್ಷಯ ಪಾತ್ರೆ.

ಮೌನಕಣಿವೆಯ ಹರಿದ್ವರ್ಣಕರಗಿ
ಕಪ್ಪು ಮಳೆ ದವಳಗಿರಿ ನೆತ್ತಿಯಲ್ಲಿ
ಮುತ್ತಿ ಸುಯುತ್ತಿರುವಾಗ
ಒಮ್ಮೆ
ಸಿಕ್ಕಿದಾಗಿತ್ತು ನಿನ್ನ ಅಕ್ಷಯಪಾತ್ರೆ
ನನಗೆ ನನ್ನಿಂದ ಸಾವಿರದ ಜನಕೆ
ಕೇಳುತ್ತೀದ್ದೇನೆ ಈಗ ಕೊಡುತ್ತೀಯ?

ಹಸಿರು ಎಂಬುದು ಒಳ್ಳೆಯ ಸಂಕೇತ. ಹಾಗೂ ಜೀವನದ ಶುಭ ಸೂಚಕ. ಕಪ್ಪು ಬಣ್ಣ ಕಷ್ಟದ ಸಂಕೇತ. ಈ ಕಪ್ಪು ಬಣ್ಣವೆಲ್ಲಾ ಮಾಯವಾಗಿ, ಕಷ್ಟದ ದಿನ ಕಳೆದು ಹೋಗಿ, ಮೋಡ ಮುಸುಕಿದ ಕಪ್ಪನೆಯ ಮಳೆ ಬಿಳಿಯ ಬೆಟ್ಟದ ಮೇಲೆ ಬೀಳುವ ಮುತ್ತಿನ ಮಣಿಗಳಂತೆ ಸುರಿಯುವಾಗ ಅ ಮುತ್ತಿನ ಹನಿಯಂತೆ ಸಿಗುವ ನಿನ್ನ ಅಕ್ಷಯಪಾತ್ರೆಯಿಂದ ಸಾವಿರಾರು ಜನಕ್ಕೆ ಉಪಯೋಗವಾಗುವುದಕ್ಕೆ ಕೇಳುತ್ತೀದ್ದೇನೆ, ದಯಾಮಾಡಿ ಕೊಡುವೆಯ!

ಪುರಾಣದ ಸ್ತ್ರೀ ಪಾತ್ರಗಳನ್ನು ಪ್ರಸ್ತುತ ಸಮಾಜದೊಂದಿಗೆ ಮುಖಾಮುಖಾಯಾಗಿಸಿ, ಹೊಸ ರೀತಿಯಲ್ಲಿ ಮುರಿದು ಕಟ್ಟುವ ಪ್ರಯತ್ನವನ್ನು ಮಾಡಿದ್ದಾರೆ. ದ್ರೌಪದಿಯಲ್ಲಿರುವ ವಸ್ತುವಿಗೆ ತುಂಬ ಬೇಡಿಕೆಯಿರವುದು. ಅದಕ್ಕೆ ಉಷರವರು ದ್ರೌಪದಿಯ ಬಳಿ ಸಂಭಾಷಣೆಯನ್ನು ಮಾಡುತ್ತಿದ್ದಾರೆ.

'ಭೂಮಿ' ಎಂಬ ಈ ಕವನದಲ್ಲಿ ಡಾ. ಎಸ್. ವಿ. ಪ್ರಭಾವತಿಯವರು ಕನ್ನಡ ಸಾಹಿತ್ಯ ಪರಂಪರೆಯ ನಿಕಟ ಗ್ರಹಿಕೆಯೊಂದಿಗೆ ಇತಿಹಾಸ ಪುರಾಣಗಳ ವ್ಯಕ್ತಿಗಳನ್ನು, ಸನ್ನಿವೇಶಗಳನ್ನು ಅತ್ಯಂತ ತೀವ್ರವಾದ .ಮಹಿಳಾ ಸಂವೇದನೆಗೆ ಮುಖ ಮುಖಿಯಾಗಿ, ಸಮಕಾಲೀನ ಬದುಕಿನ ಉತ್ಸಾಹ, ಸಾವಿನ ಕಾವ್ಯಕ್ಕೆ ವಿಶಿಷ್ಟ ಜೀವಂತಿಕೆಯನ್ನು ತುಂಬಿಸಿದ್ದಾರೆ. 'ದ್ರೌಪದಿ' ಎಂಬ ಕವನದಲ್ಲಿ ದ್ರೌಪದಿಯನ್ನು ಮತ್ತೆ ಮತ್ತೆ ವಿಶ್ಲೇಷಿಸಿದ್ದಾರೆ. ಪುರಾಣಕಾಲದಲ್ಲಿ ಸ್ತ್ರೀ ಹೇಗೆ ಶೋಷಣೆ, ಅವಮಾನ, ಅಪಮಾನಗಳಿಗೆ ಒಳಗಾಗಿದ್ದಳೋ, ಆ ಕಥೆ ಈಗಲೂ ಮುಂದೆವರೆದಿದೆ. ಎಂಬುದನ್ನು ಪುರಾಣದ ದ್ರೌಪದಿಯ ಮೂಲಕ ಹೇಳಿದ್ದಾರೆ.

ದ್ರೌಪದಿ

ಮತ್ತೋಮ್ಮೆ

ದ್ರೌಪದಿ ಹಸಿ ಹಸಿಯಾಗಿ ಬತ್ತಲಾಗಿದ್ದಾಳೆ

ಚಳಿಗೆ ಅವಳ ಮೂಳೆಗಳೂ ನಡುಗುತ್ತಿವೆ

ಈಗ ಅವಳು ಪುಸ್ತಕಗಳಲ್ಲಿ ಪತ್ರಿಕೆಗಳಲ್ಲಿ

ಸಂಶೋಧನೆಗಳಲ್ಲಿ ಮತ್ತೆ ಮತ್ತೆ ಬರೆಯಲ್ಪಟ್ಟು

ವಿವರಿಸಲ್ಪಟ್ಟು, ಆಧ್ಯಾತ್ಮ ಮಂದಿರಗಳ ಅಸ್ಪಷ್ಟ

ಪದ ಪುಂಜಗಳಲ್ಲಿ ತರಯಲ್ಪಟ್ಟು

ಮತ್ತೊಮ್ಮೆ ಬತ್ತಲಾದ್ದಾಳೆ

ದ್ರೌಪದಿಯನ್ನು ಪಣವಿಟ್ಟು ದುಶ್ಯಾಸನಿಂದ ಸೀರೆ ಸೆಳೆಯಲ್ಪಟ್ಟು ಬಾಹ್ಯವಾಗಿಯೇ ಬೆತ್ತಾಳಾದಳು. ಆದರೆ ಇಂದು ಹುಟ್ಟಿಹಳು ಸೀರೆ, ವೇಷ ಧರಿಸಿಹಳು, ಅವಳಒಡವೆಯೇ ಬೆಟ್ಟ, ಗುಡ್ಡ, ನದಿ ಬಯಲಲ್ಲಿ ಸೀರೆ. ಬುದ್ದಿ ಜೀವಿಗಳ ಕವನದಲ್ಲಿ, ವಿದ್ಯಾ ಪ್ರಯೋಗ ಶಾಲೆಗಳಲ್ಲಿ, ಕವನ, ಗ್ರಂಥಸಾಹಿತ್ಯ, ಕವಿತೆಗಳಲ್ಲಿ ಓರೆಹಚ್ಚಿ, ಮೊದಲೆ ಬಯಲಾದ ದ್ರೌಪದಿಯನ್ನು ಮತ್ತೆ ಮತ್ತೆ ದ್ರೌಪದಿಯನ್ನು ಬಯಲುಗೊಳಿಸುತ್ತಾ, ಟೀಕೆ ಟಿಪ್ಪಣಿಗಳಲ್ಲಿ ಮೆರೆಯುವರು. ಇವರು ಹೇಗೆ ಉಳಿಸುವರು ಮಾನಿನಿಯ ಮಾನ! ಅವಳ ದೇಹವನ್ನು ಮತ್ತೆ ಮತ್ತೆ ಶೋಧಿಸಿ, ವರ್ಣಿಸಿ ಅವಳನ್ನ ಒಂದು ವಸ್ತು ವಿಷಯವಾಗಿ, ಅವಳಲ್ಲಿಯಾ ಭಾವನೆಯನ್ನು ನಿರ್ಜಿವ ವಸ್ತುವಾಗಿ ಮಾಡಿದ್ದಾರೆ.

ಅವಳ ದೇಹರಚನೆ ಮುಖ ಮಾಟ ಮೆದುಳು

ಎಲ್ಲವೂ... ಎಲ್ಲವೂ ಅವಳೇನು ಒಂದು

ಒಣ ವಿಷಯವೂ ಎಂಬಂತೆ ಪಾಠ ಮಾಡಲ್ಪಟ್ಟಿವೆ

ಅವಳನ್ನು ಎರಡರಷ್ಟು ದಂಡಿಸಿದ ಆ

ಅನಾಗರಿಕ ಸಂಸ್ಕೃತಿಯ ಹೊರೆ ಭಾರ

ಇತ್ಯಾದಿಗಳಲ್ಲಿ ನೆಟ್ಟಗೆ ನಿಲ್ಲುತ್ತಾಳೆ

ಓಂದೆ ಮಾಡಿದ ಅವಮಾನವನ್ನು ಅದೇ, ಇಂದು ಒಂದು ವಿಷಯವಾಗಿ ರೂಪಗೊಂಡಿದೆ. ಅನಾಗರೀಕ ಮಾಡಿದ ತಪ್ಪಿನ ಹೊರೆ, ಪುಸ್ತಕದಲ್ಲಿ ಇಂದು ಹಗುರವಾಗಿಸಿದೆ. ಇವಳನ್ನ ಒಂದು ಪ್ರತಿಮೆಯಾಗಿ ಮಾಡಿ ನಿಲ್ಲಿಸಿದ್ದಾರೆ.

ಈಗವಳು ಗಾಜಿನಂತೆ ಪಾರದರ್ಶಕ

ಈ ಗಾಜಿನ ಮೂಲಕ ನಾವು ಅವಳ

ಲೋಕವನ್ನು ಸ್ಪಷ್ಟವಾಗಿ ಕಾಣಬಲ್ಲೆವು

ಇವಳನ್ನ ಒಂದು ಪಾರದರ್ಶಕದಲ್ಲಿ ಇಟ್ಟು ಸ್ಪಷ್ಟವಾಗಿ ಗುರುತಿಸಿದ್ದಾರೆ. ಇವಳೇ ದ್ರೌಪದಿ ಎಂಬುದಕ್ಕೆ ಗಾಜಿನ ಮೂಲಕ ಇಡೀ ಲೋಕವೇ ಗುರುತಿಸುವ ಮಟ್ಟಗೆ ಮಾಡಿದ್ದಾರೆ.

ಕೂಪನ್ ಹೆಗನ್ ನಲ್ಲಿ ನಡೆದ ವಿಶ್ವಸಂಸ್ಥೆಯ

ಸಾವಿರಾರು ಸಭೆಗಳ ಲಕ್ಷಣಗಳನ್ನು ಈಗ

ಅವಳ ಮುಖದ ಮೇಲೆ ಕಾಣಬಹುದು

ತಳು ಹಾಳೆಗಳ ಮೇಲೆ ತೆಗೆದುಕೊಂಡು

ತೀರ್ಮಾನಗಳೇ ಈಗವಳ ಸುತ್ತ ಬೆಚ್ಚನೆಯ

ಬಟ್ಟೆಯಾಗಿ ಸುತ್ತಿಕೊಂಡಿವೆ

ಕೂಪನ್ ಅನ್ನುವ ಹೆಸರೇ ಕತ್ತಲು ಈ ಕತ್ತಲಿನಲ್ಲಿ ಹಲವಾರು ಒಕ್ಕೂಟ ರಾಷ್ಟ್ರಗಳಿಗೆ ಇವಳದೇ ವಿಷಯವನ್ನು ವಾದವಿವಾದದ ಚರ್ಚೆ ನೆಡೆದು, ಕತ್ತಲಿನಿಂದ ಬೆಳಕಿನಡೆಗೆ ಇವರ ತೀರ್ಮಾನಗಳೇ ಬಳಿಯ ಹಾಳೆಯ ಮೇಲೆ ಬರೆಯಲಾಗಿದೆ. ಅವಳ ನೋವಿಗೆ, ಅವಮಾನಕ್ಕೆಲ್ಲಾ ಒಂದು ಮುಕ್ತಾಯ ಹೇಳಿದೆ.

ಬಹು ಹಿಂದೆ, ಅವಳೇನು ಒಂದು ಮಿಡಿಯುತ್ತಿರುವ

ಯಂತ್ರವೂ ಎಂಬಂತೆ ಹೊಡೆದು

ಹೊರಕ್ಕೆಸೆದಿದ್ದರಲ್ಲಾ ಆ ನೋವೂ

ಅಂದು ಸ್ಫುಟವಾಗಿದ್ದದ್ದು ಈಗ ಎಷ್ಟೂ ಕಡಿಮೆಯಾಗಿದೆ

ಆಗವಳ ದೇಹದ ಮೇಲೆ ಮೂಡಿದ್ದ

ಊದಿದ ನೀಲಿ ಕೆಂಪು ಮೂಗೇಟುಗಳು

ಅಂದು ಅವಳಿಗೆ ಬಹು ಬೇಗ ಅನುಕಂಪ

ಗಳಿಸಿ ಕೊಟ್ಟಿದ್ದವು.

ಆದರೆ ಮಾಡಬೇಕಾದುದೆಲ್ಲವನ್ನೂ

ಅವಳು ಅಂದೇ ಮುಗಿಸಿದ್ದಳು

ತನ್ನನ್ನು ಕೆಣಕಿದವರನ್ನು ಪ್ರತಿಭಟಿಸಿದ್ದಳು

ಖಿನ್ನತೆಗೆ ತಳ್ಳಿದ್ದಳು

ಅದನ್ನೂ ಅವಳು ಮಾಡಿದ್ದು

ತನ್ನ ಭಯಂಕರವಾದ ಬತ್ತಲೆಯಿಲೇ

ಆದರೂ ಇವಳನ್ನ ಕೇಳದೇ ಕೆಲವು ತೀರ್ಮಾನಗಳನ್ನು ತೆಗೆದುಕೊಂಡು ಅವಳಿಗೆ ರಕ್ಷಣೆಯ ಮಾನ ಒದಗಿಸಿಕೊಂಡುವರು. ಹಿಂದೆ ನೋವು, ದುಃಖ ಎಲ್ಲಾ ಸಹಿಸಿಕೊಂಡರೂ ನನ್ನನ್ನು ಇವರಲ್ಲಾ ಹೊರಕ್ಕೆ ತಳುತ್ತಾರೆ. ನನ್ನ ಮೇಲೆ ಆದ ಗಾಯಗಳಿಗೆ ನೋಡಿದವರಿಗೆ, ಅನುಕಂಪ ತೋರಿಸುತ್ತಾರೆ.

ಹಿಂದೆ ಇದೇ ದ್ರೌಪದಿಯನ್ನು ದುಖಃಕ್ಕಾಗಿಯೇ ಹುಟ್ಟಿರುವಳೇನೋ ಎಂಬಂತೆ ದುಖಃವನೇ ಕೊಟ್ಟು ಎಸೆದರಲ್ಲಾ, ಅದೇ ಇಂದು ಆ ನೋವು ಎಷ್ಟೋ ಕಡಿಮೆಮಾಡಿದ್ದಾರೆ.. ಹಿಂದೆ ಆದ ನೋವಿಗೆ ಅವಳ ಎಲ್ಲಾ ಸೇಡನ್ನು ತೀರಿಸಿಕೊಳ್ಳುತ್ತಾಳೆ? ಮಾಡಬೇಕಾದುದನ್ನು ಎಲ್ಲಾ ಮುಗಿಸುತ್ತಾಳೆ. ಕೆಣಕಿ ಬಂದವರನ್ನು ಸಾಯಿಸುತ್ತಾಳೆ. ಅಂದು ಅವಳ ಪ್ರೇರಕ ಶಕ್ತಿಯಿಂದ ತನ್ನ ಎಲ್ಲಾ ನೋವನ್ನು ಸಹಿಸುವುದರ ಜೋತೆಗೆ ರೊಷದಿಂದ, ಸೇಡಿನಿಂದ ತೃಪ್ತಿ ಪಟ್ಟರೂ ಆದರೂ ಇಂದಿಗೂ ಇವಳನ್ನ ಬೆತ್ತಲೆಯಿಂದಲೇ ನೋಡುವರು.

ಈ ಕವನದಲ್ಲಿ ಅನುಭವ ತನ್ನಷ್ಟಕ್ಕೆ ತಾನೇ ಅರಳುವ ರೀತಿ ಇಲ್ಲಿ ಇಲ್ಲ. ಎದುರಿಗಿದ್ದ ಯಾರನೋ, ಯಾವುದನೋ ಉದ್ದೇಶಿಸಿ ಹೇಳುವ ರೀತಿಯಲ್ಲಿ, ವಾದವೊಂದು ಪ್ರತಿಪಾದಿಸಲಟ್ಟು ತನ್ನ ತಾರ್ಕಿಕ ಕೊನೆ ಮುಟ್ಟುವುದು ಇಲ್ಲಿಯ ಪರಿಸಹಜವಾಗಿಯೇ ಒಂದನೊಂದು ಬೆನ್ನಟ್ಟಿ ಬರುವ ಸಮುದ್ರದ ಅಲೆಗಳಂತೆ ಇಲ್ಲಿಯ ಮಾತುಗಳು ನಿರಂತರ ಗತಿಯಲ್ಲಿ ಚಲ್ಲಿಸುತ್ತವೆ. ಬದುಕಿನ ಉತ್ಸಾಹ, ಸಾವಿನ ಉತ್ಕಟತೆ, ಸಂಬಂಧಗಳ ಚುಂಬಕ ಸೆಳೆತ ಈ ಕಾವ್ಯದಲ್ಲಿ ಒಡ ಮೂಡಿದೆ.

ಶಾಂತಾ ಜಗದೀಶ್‌ರವರೂ 'ಮೌಲ್ಯ' ಎಂಬ ಕವನದ ಮೂಲಕ ದ್ರೌಪದಿಯ ಬಾಳ ಬವಣೆಯನ್ನೂ ಸೀರೆಯ ಮೂಲಕ ವ್ಯಂಗ್ಯ, ವಿಡಂಬನೆ, ಪ್ರತಿಮಾ ವಿಧಾನ ಹೀಗೆ ಎಲ್ಲ ದೃಷ್ಟಿಗಳಿಂದ ಕವನದಲ್ಲಿ ವ್ಯಕ್ತವಾಗಿದೆ.

ಕೈಗಾರಿಕೋದ್ಯಮ ಕಾವ್ಯಕ್ಷೇತ್ರದ ಮೇಲೆ ಪ್ರಭಾವ ಬೀರಿರುವುದಕ್ಕೆ ಈ ಕವನ ಸಾಕ್ಷಿಯಾಗಿದೆ. ದ್ರೌಪದಿ ವಸ್ತ್ರಾಪಹರಣವನ್ನು ಕಂಡು ಸಂಕಟಪಡುವುದಕ್ಕೆ ಬದಲಾಗಿ ಅವಳುಟ್ಟ ಸೀರೆಗೆ ಹಂಬಲಿಸುವುದರ ಈ ವಿಡಂಬನೆಯಲ್ಲಿ ಕಾಲದ ಅಂತರ ಸಹಜವಾಗಿಯೇ ಎದ್ದು ಕಾಣುತ್ತದೆ. ಶಬ್ದ ಚಮತ್ಕಾರದಿಂದ ಶ್ಲೇಷೆಯನ್ನು ತಂದು ಕವನದ ಸೂಬಗನ್ನು ಹೆಚ್ಚಿಸುತ್ತದೆ.

<u>ದ್ರೌಪದಿಗೆ ಸೀರೆ</u>

ದ್ರೌಪದಿಗೆ ಸೀರೆ ಕೊಟ್ಟಿದ್ದಕ್ಕೆ

ಬಿನ್ನಿಯವರಿಗೆ ಪ್ರಚಾರ

ಬನ್ನಿ ಸೀರೆಯುಟ್ಟದ್ದಕ್ಕೆ

ದ್ರೌಪದಿಗೆ ಮಾಡೆಲ್ಲಾಗುವ ಅವಕಾಶ

ದ್ರೌಪದಿ ಎಂದ ಕ್ಷಣ ಕಣ್ಣ ಮುಂದೆ ಬರುವುದು ಅವಳ ಮಾನಪಹರಣ. ಈ ಮಾನಪಹರಣಕ್ಕೆ ಕಾರಣವಾಗುವ ಸೀರೆ. ಇಂದೂ ಈ ಸೀರೆಗೆ ಹೆಚ್ಚಿನ ಬೇಡಿಕೆ. ಈ ಬೇಡಿಕೆಯಿರುವುದರಿಂದ ಕೈಗಾರಿಕೋದ್ಯಮದವರಿಗೆ ಹೆಚ್ಚಿನ ಬೇಡಿಕೆ. ಇವಳ ಹೆಸರನ್ನ ಬಳಸಿ ಮಾಡೆಲ್ ಆಗುತ್ತಿದ್ದಾರೆ.

ಟಿ.ವಿ. ನೋಡಿದ---ಪೇಪರಿನಲ್ಲಿ

ಮತ್ತೂ ಡೀಟೈಲಾಗಿ ಸೀರೆ ನೋಡಿದ

ಹೆಂಗಸರ ಹೃದಯದಲ್ಲಿ

ಆಸೆಯ ಹೊವುಗಳು!

ಹೆಂಗಸರ ಮನ ಸೆಳೆಯುವ ಸೀರೆ. ದ್ರೌಪದಿಯ ಸೀರೆ. ಸೀರೆಯ ಜೊತೆಗೆ ದ್ರೌಪದಿಯ ಮಾರಾಟ. ಅಂದು ಪತಿಯರೆ ದ್ರೌಪದಿಯನ್ನು ಮಾರಾಟ ಮಾಡಿದರು. ಇಂದು ಅವಳ ಪ್ರಚಾರದಲ್ಲಿ ಜಾಹಿರಾತಿನ ಮೂಲಕ ಇವಳ ಸೀರೆಯ ಮಾರಾಟ.

ಸೀರೆಯ ಬೆಲೆ ವಿಚಾರಿಸಿದ

ಗಂಡನೊಬ್ಬನ ಎಚ್ಚರಿಕೆ

"ಸೀರೆಗಳ ರೇಟು ಈ ಮಟ್ಟ-

ತಲುಪುತ್ತಿದ್ದರೆ ಹಾದಿ ಹಾದಿಯಲ್ಲೂ

ವಸ್ತ್ರಾಪಹರಣ ಸಾಮಾನ್ಯವಾದೀತು!

ಸಧ್ಯ ಸೀತೆಯಾಗಿರು ಸಾಕು

ಇಷ್ಟಕ್ಕೂ ನಿನಗಾವ ಕೃಷ್ಣನಿದ್ದಾನೆ

ಹೇಳು ಕಾಪಡಲು?"

ಇವಳನ್ನ ಕೊಂಡು ಕೊಳ್ಳಲು ಒಬ್ಬ ಕಾಮುಕ ವಿಚಾರಿಸಿದ. ಆದರೆ ಇವಳನ್ನ ಮೊದಲೇ ಕೊಂಡಿರುವ ಗಂಡ. ಇವನ ಎಚ್ಚರಿಕೆಯ ಭಯ. ಸೀರೆಯ ಜೊತೆಗೆ ಇವಳ ಮಾರಟದಿಂದ ಮಾನವು ಅಪಹರಣ ವಾದರೆ ಯಾರು ಇವಳನ್ನ ಮಾನ ರಕ್ಷಣೆ ಮಾಡುವರು. ಅಂದು ನಿನ್ನ ಮಾನ ಕಾಪಡಲು ಕೃಷ್ಣನಿದ್ದ. ಇಂದು ಎಲ್ಲಾ ಕಡೆ ಕಾಮುಕ ಕೀಚಕರೆ ಇರುವಾಗ ಮಾನ ಉಳಿಸಲು ಯಾರು? ಸೀತೆ ರಾವಣನ ಬಳಿ ಮೌನದಿಂದಲೇ

ಎಲ್ಲಾ ಸಹಿಸಿ ಕೊಳ್ಳವಳು. ನೀನು ಸೀತೆಯ ಹಾಗೆ ಇದ್ದರೆ ಯಾವ ಪ್ರಚಾರವು ಬರುವುದಿಲ್ಲ. ಆದರೂ ನೀನ್ನನ ನೋಡುಲು ಯಾವ ಆಪತ್ತ್ ಬಂದಾವನಿದ್ದಾನೇ ಹೇಳು.

ಇಲ್ಲಿ ಶಾಂತರವರು ದ್ರೌಪದಿಯನ್ನ ಒಬ್ಬ ಸೀರೆಯನ್ನ ಮಾದರಿ ರೂಪದಲ್ಲಿ ಗುರುತ್ತಿಸಿದ್ದಾರೆ. ಅಂದು ಮಾರಟ ಮಾಡಿದ ಗಂಡ ಇಂದು ದ್ರೌಪದಿಯ ಸೀರೆಯ ಮಾರಾಟದ ಜೊತೆಗೆ ಮಾನವು ಮಾರಾಟವಾಗುತ್ತಾಯಿದೆ.

..'ಹಕ್ಕಿ ಮತ್ತು ಗಿಡುಗ' ಎಂಬ ಕವನದಲ್ಲಿ ಉಷಾ ಪಿ.ರೈ ರವರು 'ದುಶ್ಯಾಸನ' ಎಂಬ ಕವನದಲ್ಲಿ ದ್ರೌಪದಿಯ ವಸ್ತ್ರಾಪಹರಣದ ಟೀಕೆಯ ಮಾತುಗಳಲ್ಲಿ ಅಂದಿನ ಸಂಸ್ಕೃತಿಗೂ ಇಂದಿನ ಸಂಸ್ಕೃತಿಗೂ ಯಾವ ರೀತಿ ಬದಲಾವಣೆಯನ್ನು ಪಡೆದುಕೂಂಡು ಬಂದಿದೆ ಎಂಬುದರ ಬಗ್ಗೆ ವ್ಯಂಗ್ಯದ ನುಡಿಗಳಲ್ಲಿ ಹೇಳಿದ್ದಾರೆ.

'ದುಶ್ಯಾಸನ'

ಅಂದು
ಋತುಮತಿಯಾಗಿದ್ದ ನಿನ್ನನ್ನು
ದರದರ ಎಳೆದು ತಂದು
ತುಂಬಿದ ಸಭೆಯಲ್ಲಿ
ದುಶ್ಯಾಸನ ನಿನ್ನ ಸೆರಗಿಗೆ ಕೈ ಹಾಕಿದಾಗ,
ನೀನೇಕೆ ಅವನ ದಹಿಸಿದೆ
ನಿನ್ನ ಪಣ ಒಡ್ಡಿದವರ ಬೇಡಿದೆ?

ಪುರಾಣಗಳನ್ನು ಚಿಕಿತ್ಸಕ ದೃಷ್ಟಿ ಕೋನದಲ್ಲಿ ನೋಡುವ ಕವಯಿತ್ರಿ, ಪರಂಪರೆಯಿಂದಲೂ ಪುರುಷನ ಆತ್ಯಾಚಾರ, ದೌರ್ಜನ್ಯ ಶೋಷಣೆಗೊಳಗಾಗಿರುವ ಸ್ತ್ರೀಯರ ಚಿತ್ರಣ, ಸ್ತ್ರೀ ನೆಲೆಯಲ್ಲಿ ಕಾಣುವ ಧೋರಣೆ ಇಲ್ಲಿ ಕಂಡು ಬರುತ್ತದೆ.

ಸೃಷ್ಟಿಯೇ ಒಂದು ನಿಗೂಢ. ಸಾಮನ್ಯವಾಗಿ ಹೆಣ್ಣು ಋತುಮತಿಯಾಗುವುದು ಒಂದು ನಿಯಮ ಈ ಸಂದರ್ಭದಲ್ಲಿ ಯಾರು ಮುಟ್ಟಸುವುದಿಲ್ಲ. ಒಂದು ರೀತಿಯಲ್ಲಿ ಅಟ್ಟು ಮುಟ್ಟು ಸೋಕಿಸುಹವುದಿಲ್ಲ. ಬಹಳ ಕಟ್ಟುನಿಟ್ಟಾಗಿ ಪಾಲ್ಲಿಸುವುದು. ಇಂತಹ ಸಂದರ್ಭದಲ್ಲಿ ದ್ರೌಪದಿ ಋತುಮತಿಯಾದಗ ದಶ್ಯಾಸನ ಅವಳನ್ನ ಮುಟ್ಟಿಸಿ ದರದರನೇ ಎಳೆದು ತುಂಜಿದ ಸಭೆಯಲ್ಲಿ ಅವಮಾನ ಮಾಡುತ್ತಾನೆ. ಇದಕ್ಕೆ ಪ್ರತಿಯಾಗಿ ದ್ರೌಪದಿ ಅವನ್ನನು ಪ್ರತಿಭಟಸುತ್ತಾಳೆ. ಕಣ್ಣಮುಂದೆಯೇ ತನ್ನ ಪತಿಯರಿದ್ದರೂ ಯಾವದೇ ಸಹಾಯಕ್ಕೆ ಬರುವುದಿಲ್ಲ.

ಅವರು ಅಸಹಾಯಕರಾಗಿ ತಲೆತಗ್ಗಿಸಿ ಕುಳಿತಾಗ
ನಿನ್ನ ಕೂಗಿಗೆ ಓಗೊಡಲು ಶ್ರೀಕೃಷ್ಣನಿದ್ದ,
ನಿನ್ನ ಸೀರೆಯ ಅಕ್ಷಯವಾಗಿಸಿದ.
ನಾವೇನ ಮಾಡಲಿ ಹೇಳು?
ನೀನಂದು ಒಬ್ಬ ದುಶ್ಯಾಸನನ ದಹಿಸಿದ್ದರೆ
ಇಂದು ಮತ್ತೆ ಮತ್ತೆ ದಶ್ಯಾಸನರು
ಹೆಡೆ ಎತ್ತುತ್ತಿರಲಿಲ್ಲ.

ಆದರೂ ನಿನ್ನ ಕಷ್ಟಕ್ಕೆ ಕೃಷ್ಣನಿದ್ದ. ಆದರೆ ಇಂದಿನ ಸಾಮಾಜದಲ್ಲಿ ಮಾಯಾರ್ದೆಗೆ ಸ್ಥಾನವಿಲ್ಲ. ಅಂದು ದುಶ್ಯಾಸನಂತಹವರು ಹಿಂದೆ ಇದ್ದು ಯಾವ ರೀತಿ ಕೆಟ್ಟ ಕೃತ್ಯಗಳಲ್ಲಿ ತೊಡಗಿದ್ದರೂ, ಅದೇ ರೀತಿ ಇಂದು ಇಂತಹ ದುಶ್ಯಾಸನಂತಹ ರಾಕ್ಷಸರು ಹುಟ್ಟುತ್ತಲೇ ಇದ್ದಾರೆ. ಈ ಕಾವ್ಯದಲ್ಲಿ ಉಷಾರವರು ಅಭಿವ್ಯಕ್ತಿಯ ಮಾನವನ ಸೃಜನಶೀಲ ಸಾಧನೆ ಅದರಲ್ಲಿ ಕಂಡದ್ದರ ಬಗ್ಗೆ ಒಳ ಮನಸ್ಸು ಗ್ರಹಿಸಿದ್ದರ ಬಗ್ಗೆ ಹೃದಯ ಆರ್ದ್ರವಾಗಿ ಮತ್ತೆ ಮತ್ತೆ ಚಿಂತನೆ ಮಾಡಿ ದ್ರೌಪದಿಯ ನೋವಿಗೆ ಸ್ಪಂದಿಸುತ್ತಾರೆ. ಭಾರತೀಯ ನಾರಿ ನಡೆದ ದಾರಿಯ ಸಂಹಾವಲೋಕನವಿದೆ. ಹೆಣ್ಣಿಂತೆ ಪ್ರಕೃತಿಮಾತೆಯೂ ಹಡೆಯುತ್ತಾಳೆ.

ಈಗ ಎಲ್ಲೆಲ್ಲೂ ದುಶ್ಯಾಸನರೇ
ಶ್ರೀಕೃಷ್ಣ ಮಾತ್ರ ಇಲ್ಲ.
ಹೆಣ್ಣಿನ ಸೀರೆ ಎಳೆಯುವಾಗ
ಅಂದಿನಂತೆ ಇಂದೂ
ಎಲ್ಲ ನಿಂತು ನೋಡುವವರೇ;
ಅಕ್ಷಯ ವಸನವಿಲ್ಲದೆ ಬೆತ್ತಲಾಗುವುದೇ
ಇಂದಿನ ಸ್ಥಿತಿ, ಇಂದಿನ ಗತಿ.

ದಶ್ಯಾಸನಂತಹವರನ್ನು ನಾಶಮಾಡಿದ್ದರೆ. ಇಂದು ಅದೇ ರಾಕ್ಷಸರು ಹೆಜ್ಜೆ ಹಜ್ಜೆಗೂ ಹಾದಿಬಿದಿಯಲ್ಲಿ ಹುಟ್ಟುತ್ತಿದ್ದಾರೆ. ಅಮಾಯಕ ಹೆಣ್ಣುಗಳು ಬಲಿಪಶುಗಳಾಗಿದ್ದಾರೆ. ಯಾರು ಸಹಾಯಕ್ಕೆ ಬರುತ್ತಿಲ್ಲ. ಅಂದು ಬೆತ್ತಲೆಯಾದ ದ್ರೌಪದಿ ಇಂದು ವಸ್ತ್ರವಿಲ್ಲದೇ ಬೆತ್ತಲೆಯಾಗುತ್ತಿದ್ದಾಳೆ. ಸತ್ತಲೂ ನಿಂತು ನೋಡುವ ಜನರೆ ಹೆಚ್ಚಾಗಿದ್ದಾರೆ. ಹಿಂದೆ ಮಾನ ಮಾರ್ಯಾದೆಗೆ ಪ್ರಾಣವನೇ ಕೊಡುತ್ತಿದ್ದರು. ಆದರೆ ಇಂದು ಮಾನ ಮಾರ್ಯಾದೆ ಬಿಟ್ಟು ಬದುಕುವ ಜನರೇ ಹೆಚ್ಚು.

ರಕ್ಷಿಸಲು ಯಾರು ಬರುತ್ತಾರೆ ಹೇಳು?

ನೀನು ದುಶ್ಯಾಸನನ ಹಿಂದೆ ಬಿಟ್ಟು ಹೋದ ಹಾಗೆ

ನಿನ್ನ ಮರ್ಯಾದೆಯ ಕಾಯ್ದ

ಶ್ರೀ ಕೃಷ್ಣನ ಬಿಟ್ಟು ಹೋಗಲಿಲ್ಲವೇಕೆ?

ಇಂದು ಮಾನ ಬಿಟ್ಟು ಬದುಕುವ ಜನರೇ ಇರುವಾಗ, ಯಾರು ಬರುವರು ಮಾನ ಕಾಪಾಡಲೂ, ಹಿಂದೆ ದುಶ್ಯಾಸನ ಮಾನ ಕಳೆಯಲು ಬಂದಾಗ ನಿನಗೆ ಕೃಷ್ಣನಿದ್ದ, ಇಂದು ಮಾನ ಕಳೆದರೂ ಯಾರು ಕೇಳುವವರಿಲ್ಲ! ಅದಕ್ಕೆ ಉಷಾರವರು ಇಂದಿನ ಸಾಮಾನ್ಯ ಮಹಿಳೆಯಾಗಿ ಕೇಳುತಿದ್ದಾರೆ ಪ್ರಶ್ನೆಯನ್ನು, ನೀನು ಯಾಕೆ ದಶ್ಯಾಸನನ ಪ್ರತಿಭಟಿಸಿದೆ? ಆದರೆ ಇಂದು ಅದೇ ಜನ ಎಲ್ಲಲ್ಲಿಯೂ ಇದ್ದಾರೆ. ಸ್ತ್ರೀ ನಾಗರಹಾವಿನ ಹಾಗೆ ಬುಸುಗುಡುವ ಬದಲು ಚಿಂತನಶೀಲೆಯಾಗಬೇಕೆಂದು. ಕವನದ ಮೂಲಕ ಇಂದಿನ ಹೆಣ್ಣಿಗೆ ಎಚ್ಚರಿಕೆಯ ಮಾತನ್ನು ಹೇಳುತ್ತಿದ್ದಾರೆ.

ಈ ಹಿನ್ನಲೆಯಲ್ಲಿ ಸಮಾಜದಲ್ಲಿನ ಮುಗ್ಧ ಜನರ ಹಾಗೂ ಮಹಿಳೆಯರ ಮೇಲಿನ ದೌರ್ಜನ್ಯ, ಶೋಷಣೆಯ ಆಕ್ರೋಶ, ಟೀಕೆ, ವ್ಯಂಗ್ಯದ ಮಾತುಗಳ ಮೂಲಕ ಪ್ರತಿಭಟನೆಯ ಜೊತೆಗೆ ಎಚ್ಚರಿಕೆಯ ಧ್ವನಿಯನ್ನು ಹೊರಹೊಮ್ಮಿಸಿದ್ದಾರೆ. ಸಮಾಜದಲ್ಲಿ ಪುರುಷರಿಗಿಂತ ಸ್ತ್ರೀ ನೋವಿನಯಾತನೆಗೆ ಒಳಗಾಗುವಳು. ಕವಯತ್ರಿ ವ್ಯಂಗ್ಯದ ವಿಷಾದದೊಂದಿಗೆ ವಿಡಂಬಿಸಿದ್ದಾರೆ.(*I'ಹಕ್ಕಿ ಮತ್ತು ಗಿಡುಗ' ಉಷಾ ಪಿ.ರೈ ಪುಟ. ಸ.47)

ಕಾವ್ಯದಲ್ಲಿ ಹೆಚ್ಚಿನವು ಸಮಾಜದಲ್ಲಿ ಹೆಣ್ಣಿಗುಂಟಾಗುತ್ತಿರುವ ಅನ್ಯಾಯವನ್ನು ಇಂದಿರಾ ಹೆಗಡೆಯವರು 'ಕಾವ್ಯಗಳ ಪುಟದಿಂದ ನೀನೆದ್ದು ನಿಲ್ಲು' ಎಂಬುದರಲ್ಲಿ ಚಿತ್ರಿಸಿದ್ದಾರೆ. ಹೆಣ್ಣಿನ ಇಂದಿನ ಸ್ಥಿತಿಗತಿಯ ಬಗ್ಗೆ ವಿಷಾದ ದಟ್ಟೈಸಿವೆ. ಪುರುಷಸ್ವಾಮ್ಯ ಸಮಾಜದ ಬಗ್ಗೆ ಆಕ್ರೋಶವಿದೆ. ಆಳವಾದ ಸಾಮಾಜಿಕ ಕಳಕಳಿಯೂ ಇದೆ.

<u>ದ್ರೌಪದಿಯರು</u>

ಉರುಳಿ ಉರುಳಿ ಸಾಗುತಿದೆ

ಕಾಲಚಕ್ರ

ಅಂತೆಯೇ ಹುಟ್ಟು ಮರು ಹುಟ್ಟುಗಳು

ಪುರುಷ ಸಾಮ್ರಾಜ್ಯದ ಆಸ್ಥಾನದಲ್ಲಿ

ದುಶ್ಯಾಸನರ ಮರು ಹುಟ್ಟು ಆಗುತ್ತಲೇ ಇದೆ

ದೃತರಾಷ್ಟ್ರನಿಗೆ ಕಿರೀಟ ದಕ್ಕುತ್ತಲೇ ಇದೆ.

ಸುಟ್ಟು ಸೀಕರಿಯಾಗಿ ತೇಲುತಿದೆ ಬಾನಗಲ

ಕಾಲಗಳು ಎಷ್ಟೇ ಬದಲಾದರೂ ಅದು ನಿಲ್ಲುವುದಿಲ್ಲ. ಅದೇ ರೀತಿ ಹುಟ್ಟು ಸಾವುಗಳು ನಡೆಯುತ್ತಲೇ ಇರುತ್ತದೆ. ಸಮಾಜದಲ್ಲಿ ಪುರುಷನ ಅಟ್ಟಹಾಸಗಳೂ ಮೆರೆಯುತ್ತಲೇ ಇವೆ. ದುಶ್ಯಾಸನಂತಹವರು ಮರುಹುಟ್ಟು ಪಡೆಯುತ್ತಲೇ ಇದ್ದಾರೆ. ಒಬ್ಬ ದಶ್ಯಾಸನ ಸತ್ತರೆ ಮತ್ತೊಬ್ಬ ದುಶ್ಯಾಸನ ರಕ್ತ ಬೀಜಾಸುರನಂತೆ ಮರುಹುಟ್ಟು ಪಡೆಯುತ್ತಲೇ ಇರುತ್ತಾನೆ. ಇಂತಹವರನ್ನು ನಾಶಮಾಡಲು ಕುರುಡು ಸಮಾಜದಲ್ಲಿ ಅಂಧಕಾರರಿಗೆ ಪಟ್ಟ ಕಟ್ಟುತ್ತಲೇ ಬಂದಿದೆ. ಅಂಧಕಾರದಲ್ಲಿ ಅಬಲೆಯರು ನಾಶವಾದರೂ ಯಾರು ಕೇಳುವುದಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ 'ಜಾತ್ಯಂಧನೂ ರಾಷ್ಟವ್ಯಾಮೋಹಿಯೂ ಆದ ದೃತರಾಷ್ಟ್ರನಿಗೆ ಇಲ್ಲಿ ಕೀರಿಟ ದಕ್ಕುತ್ತಲೇ' ಇರುವುದು. ತುಂಬ ಅರ್ಥಪೂರ್ಣವಾಗಿರುವ ಈ ಸಾಲುಗಳು ಗಮನಿಸಿದರೆ ಇಂದಿನ ಸಮಾಜದಲ್ಲಿ ಗಂಡಿಗೆ ಮರ್ಯಾದೆ ದಕ್ಕುವಂತಿರುವ ಪ್ರವೃತ್ತಿಯನ್ನು ವಿಡಂಬಿಸುವ ನಮ್ಮ ಸಂಸ್ಕೃತಿಯಲ್ಲಿಯ ವ್ಯಂಗ್ಯದ ಪರಿಣಾಮಕಾರಿಯಾಗಿದೆ. ರಾಕ್ಷಸರ ಕೈಲಿ ಅಮಾಯಕ ಹೆಣ್ಣುಗಳು ಬಲಿಯಾಗುತ್ತಲೇ ಇದ್ದಾರೆ. ಅಂದು ದ್ರೌಪದಿಯ ಸೀರೆ ಎಳೆದಾಗ ಅವಳ ದುಃಖದ ಧ್ವನಿಯು ಮೂರು ಲೋಕಗಳಲ್ಲಿಯೂ ಚೀರಾಟ ಕೆಳುತ್ತಿದೆ. ಅಸಾಹಯಕ ಸ್ಥಿತಿಯಲ್ಲಿದ್ದಾಗ ಹೆಣ್ಣಿಗೆ ರಕ್ಷಣೆ ಕೊಡುವವರು ಯಾರು?

ಹೆಣ್ಣ ಬಿಚ್ಚಿಹ ಸೀರೆಗಳು!

ಕೇಳುತಿದೆ ಆರ್ತ ಸ್ವರ

ಪಾತಳ ತಳದಿಂದ

ಬಾನಲ್ಲಿ ಅನುರಣಿಸುತಿದೆ

ದ್ರೌಪದಿಯರ ಚೀರಾಟ?

ಮನದ ಚಂಚಲ ಬಟ್ಟಲಲ್ಲಿ

ಹೃದಯ ಮೀನನು ಭೇದಿಸಿ

ಒಡನೆ ಕರೆದೊಯ್ದು ಪತಿ

ಮಾತೆಯತಿಯಕ್ಕರೆಯ ಸಕ್ಕರೆಗೆ

ಸತಿಯ ಕಬ್ಬಾಗಿಸಿ

ಅತ್ತೆಯಭಿಪ್ರಾಯಗಳು ಬೂದಿ ಮುಚ್ಚಿದ ಕೆಂಡದ ಹಾಗೆ ಸೆರಗಲ್ಲಿ ಕಟ್ಟಿ ತನ್ನ ಬಲಿಯಾಗಿಸುವ ಸತಿಯನ್ನೇ ಮಾರಟ ಮಾಡಿ ಹೃದಯವನ್ನೇ ಬೇರೆ ಮಾಡಿದ ಈ

ಪತಿಯರೇ! ಗಂಡಿನ ಸಮಾಜದಲ್ಲಿ ತಾಯಿಗೆ ಸಿಕ್ಕಂತಹ ಗೌರವದ ಮಾರ್ಯದೆ ಸತಿಗೆ ಸಿಗುವುದೇ? ಅತ್ತೆಯ ಮಾತುಗಳೇ ವೇದವಾಕ್ಯವಾಯಿತೇ? ಪತ್ನಿಯ ಮಾತುಗಳ ಅಭಿಪ್ರಾಯ ಕೇಳುವವರಿಲ್ಲ.! ಬೂದಿ ಮುಚ್ಚಿದ ಕೆಂಡ ಒಳಗಡೆಯೇ ಸುಡುವಂತಾಯಿತ್ತು. ಅವಳ ನೋವನ್ನು. ದುಃಖವನ್ನು ತನ್ನಲ್ಲಿಯೇ ಉಳಿದು ಬಿಡುತ್ತದೆ.

ಕೇಳುತಿದೆ ದ್ರೌಪದಿಯರ ಬಿಕ್ಕಳಿಕೆ
ಮನೆ ಮಂದಿ ಉಂಡುಳಿದ
ತಪ್ಪಲೆಯ ತಳ ಕೆರೆದು ಉಣಲೆಂದು ಕೂತ
ತುತ್ತು ಎತ್ತುವ ಸಮಯದಿ
ಅತಿಥಿಗಹ್ವಾನ ನೀಡುವ ಪತಿಯ ಆರ್ದಶಕ್ಕೆ
ಸತಿಯ ಅಕ್ಷಯ ಪಾತ್ರೆ
ತೊಳೆದ ಪಾತ್ರೆಯ ತಳದ ಹೊಳಪಲ್ಲಿ
ದ್ರೌಪದಿ, ಕಾಣುತಿದೆ ನಿನ್ನ ಛಾಯೆ!

ಸ್ತ್ರೀ ಕುಟುಂಬದ ಜವ್ದಾರಿಯ ಹೊಣೆ ಹೊತ್ತಿರುತ್ತಾಳೆ. ಅದರಲ್ಲೂ ಮನೆಯವರಲ್ಲಾ ಊಟವಾದ ಮೇಲೆಯೇ ಕೊನೆಯಲ್ಲಿ ಉಳಿದಿರುವ ಊಟವನ್ನು ಮನೆಯ ಹೆಂಗಸರು ತಿನ್ನುವುದು. ಇದು ಲೋಕ ರೂಢಿ. ಹಾಗೆಯೇ ದ್ರೌಪದಿಯು ಸಹ ಉಳಿದಿರುವ ಊಟ ತಿನ್ನುವ ಹೊತ್ತಿಗೆ ಪತಿಯು ಆರ್ದಶವೆನಿಸಿ ಕೊಳ್ಳುವ ಸಲುವಾಗಿ ಅತಿಥಿಯ ಆಹ್ವಾನ. ಉಳಿದಿರು ಊಟ ಬೇರೆಯವರ ಪಾಲಿಗೆಯಾದರೆ, ನಿನ್ನ ಗತಿ ತೊಳೆದ ಪಾತ್ರೆಯಲ್ಲಿ ನಿನ್ನ ಭಾವ ಚಿತ್ರವೇ?

ಪತಿ ನೆಟ್ಟ ಧರ್ಮ ವೃಕ್ಷ
ಅದರ ಬೇರುಗಳು ಜಗದಗಲ, ಯುಗದಗಲ
ಓಸಿಲುಗಳ ಬಾನಗಲ
ಜಗದ ಜೀವಿಗಳ ಮೂಗಡರುವ
ಪುಷ್ಪದ ಕಂಪು!
ಆದರೆ ಅದಕ್ಕೆ ನೀರುಣಿಸಿ
ಜಡ್ಡು ಗಟ್ಟಿದ ಸತಿಯ ಸೊಂಟವ ಕಾಣುವ ಕಣ್ಣಿಗೆ

ಬಾಧಿಸುತಿದೆ ನೆನಪು. ದ್ರೌಪದಿ!

ಪತಿ ಹಾಕದ ಧರ್ಮದ ಬೀಜ ಮರು ಹುಟ್ಟು ಪಡೆಯುತ್ತಲೇ ಇವೆ. ಅದು ದೊಡ್ಡ ಮರವಾಗಿ ಅದರ ರಂಬೆ ಕೊಂಬೆಗಳು ದಷ್ಟವಾಗಿ ಬೆಳೆದು ಮತ್ತೇ ಮತ್ತೇ ಚಿಗುರುತ್ತಲೇ ಇವೆ. ಅದರ ಸುಹಾಸನೇ ಎಲ್ಲಾ ಕಡೆಗೂ ಹರಡುತ್ತಲೇ ಇದೆ. ಮರದ ಬುಡದ ನೀರು ಹಾಕಿ ದಷ್ಟವಾಗಿದ್ದಾಗಲೇ ಅದರ ಬಳಕೆ. ಹಾಗೆಯೆ ನಿನ್ನನ್ನು ನಿನ್ನ ಪತಿಗಳು ಹೇಗೆಲ್ಲಾ ಬಳಸಿಕೊಂಡರು ದ್ರೌಪದಿ!

ಎಂಬ ಪ್ರಶ್ನೆಗಳ ಮೂಲಕ ಈ ಕವನದಲ್ಲಿ ದ್ರೌಪದಿಯ ಅಂತರಳಾದ ಮಾತುಗಳಿಗೆ ನಾಯ್ಯವನ್ನು ಒದಗಿಸಲು ಮುಂದಾಗುತ್ತಾರೆ.

<u>ಪ್ರಶ್ನಿಸಿಸಲಿಲ್ಲವೇಕೆ</u>

"ತುಂಬಿದ ಸಭೆಯಲಿ
ಸೀರೆ ಸೆಳೆಸಿಕೊಂಡು
ಗಂಡಂದಿರ ಧರ್ಮಕಾಯಲು
ಮರುಮಾತಿಲ್ಲದೆ
ಪಣಕ್ಕಿಡಿಸಿಕೊಂಡಿರಲ್ಲೇ"

ಇತಿಹಾಸ ಮತ್ತು ಪುರಾಣ ಪ್ರಸಿದ್ದವಾದರೂ ಅಲ್ಲಿಯ ಸ್ತ್ರೀಯ ಸಂವೇದನೆಗೆ ಯಾರೂ ಪ್ರಶ್ನಿಸಲಿಲ್ಲವೇಕೆ. ದ್ರೌಪದಿ ಪಟ್ಟ ಪಾಡಿಗೆ ಅವಳ ಗಂಡಂದಿರೇ ಹೊಣೆಯೇ? ದುಃಖ, ನೋವು, ಸುಖ, ಎಲ್ಲವನ್ನೂ ತನ್ನ ಗಂಡಂದಿರಲೇ ಹಂಚಿಕೊಂಡಿದ್ದರೂ ಕೊನೆಗೆ ಬಂದ ಗತಿ ತುಂಬಿದ ಸಭೆಯಲ್ಲಿ ಅವಳನ್ನು ಮಾರಾಟ ಮಾಡಿಬಿಟ್ಟರು. ಆದರೆ ಯಾರು ಅವಳನ್ನು ಕೇಳದೇ ವಸ್ತುವಾಗಿ ಮಾರಿಬಿಟ್ಟರು.

ಇಂತಹ ಗಂಡಂದಿರನ್ನು ಯಾರೂ ಆ ತುಂಬಿದ ಸಭೆಯಲ್ಲಿ ಹಿರಿಯರು ಯಾರು ಪ್ರಶ್ನಿಸಲಿಲ್ಲವೇಕೆ? ಇಂತಹ ಪ್ರಶ್ನೆಗಳ ಮೂಲಕ ದ್ರೌಪದಿ ತನ್ನ ನೋವು ದುಖಃಗಳನ್ನು ಹೊರಗೆಳೆಯುತ್ತಾಳೆ. ಅಂದಿನ ಪುರುಷ ಪ್ರಧಾನ ಸಮಾಜವನ್ನು ಪ್ರಶ್ನಿಸುವ ಕಾರಣ ಅವರಿಗೆ ಈ ಗತಿ ಬಂತೆ?

ನಮ್ಮ ಸಂಸ್ಕೃತಿ ಪತಿಪಾರಾಯಣೆಯರಾದ ಸತಿಯರೆಂದು ಗುರುತಿಸುತ್ತ ಬಂದಿದೆ. ಆದರೆ ಈ ನಾರಿಯರು ತಮ್ಮ ಗಂಡಂದಿರು ಶ್ರೇಷ್ಠ ಪುರುಷರಾಗಿ, ಪುರುಷೋತ್ತಮರಾಗಿ, ಧರ್ಮ ಪ್ರಭುಗಳಾಗಿ ಲೋಕದಲ್ಲಿ ಗುರುತಿಸಿಕೊಂಡಿರುವುದಕ್ಕೆ ಅನೇಕ ರೀತಿಯಲ್ಲಿ ಕಾರಣಕರ್ತರಾಗುತ್ತದೆ. ತಮ್ಮ ಗಂಡಂದಿರು ಸಮಾಜದ ದೃಷ್ಟಿಯಲ್ಲಿ ಮೇಲಿರುವಂತಾಗಲು ಈ ನಾರಿಯರು ಪಟ್ಟಕಷ್ಟಗಳೆಷ್ಟು, ಸಹಿಸಿದ ನೋವುಗಳೇನು

ಎಂಬುದರ ಬಗ್ಗೆ ಲೋಕ ಗಂಭೀರವಾಗಿ ಯೋಚಿಸಿಲ್ಲ. ಪತಿಗಳ ವ್ಯಕ್ತಿತ್ವದ ಉನ್ನತೀಕರಣಕ್ಕೆ ಏಣಿಗಳಾದ ಇವರು ಆಟಕ್ಕುಂಟು ಲೆಕ್ಕಕ್ಕಿಲ್ಲ ಎಂಬಂತಾಗಿದ್ದಾರೆ.

ಏನಾದರೂ ಹೇಳಲಿ, ಗಂಡಂದಿರನ್ನು ಏನೂ ಪ್ರಶ್ನಿಸದೆ ಮೂಕ ಪ್ರಾಣೀಗಳ ಹಾಗೆ ಎಲ್ಲವನ್ನು ಮೌನವಾಗೇ ಸಹಿಸಿದರೆ ಹೊರತು, ಅವರಿಗೆ ಸವಾಲು ಎಸೆಯಲಿಲ್ಲವೇಕೆ? ಪುರುಷನ ದಬ್ಬಾಳಿಕೆ, ಅನ್ಯಾಯ, ಅಕ್ರಮಗಳನ್ನು ಸಹಿಸಿಕೊಂಡು ಬಾಳುತ್ತಿರುವ ವರ್ತಮಾನದ ಅನೇಕ ಹೆಣ್ಣುಗಳ ಪ್ರತಿಭಟನೆಯ ದನಿಯನ್ನೂ ವ್ಯಕ್ತವಾಗುವುದನ್ನು ಇಲ್ಲಿ ವಿಸ್ತರಿಸಿ ನೋಡಲು ಅವಕಾಶವಿದೆ.

**'ಡೈವೊರ್ಸ್'** ಕವಿತೆಯಲ್ಲಿ ಈ ಪದ ಆಂಗ್ಲ ಭಾಷೆಯಾದರೂ ಇಂದು ಇದು ಸಾಮನ್ಯ ಪದವಾಗಿದೆ. ಅಂದಿನ ಸಮಾಜದಲ್ಲಿ ಈ ಪದದ ಬಳಕೆಯಲ್ಲಿದ್ದರೂ, ಯಾರೂ ಇದನ್ನು ಬಳಸುತ್ತಿರಲ್ಲಿಲ್ಲ. ಆದರೆ ಮರುವಿವಾಹ ಪದ್ಧತಿಯು ರೂಢಿಯಲ್ಲಿತು. ಅದೇ ರೀತಿ ಪೌರಾಣಿಕ ಕಾಲದಲ್ಲಿ ವಿಚ್ಛೇದ ಎಂಬ ಪದ ಬಳಕೆಯನ್ನು ಬಳಸದೆ ಮರುವಿವಾಹ ಪದ್ಧತಿ ಇತ್ತು. ಕುಂತಿ ವರಗಳನ್ನು ಪಡೆದು ಸೂರ್ಯನಿಂದ ಕರ್ಣನನ್ನು ಪಡೆದು ಯಾರಿಗೂ ಗೊತ್ತಾಗದೆ ನೀರಿನಲ್ಲಿ ತೇಲಿಬಿಟ್ಟಳು. ತುಂಬಿದ ಸಭೆಯಲ್ಲಿ ದುಶ್ಯಾಸನ ಹಾಗೂ ದುರುಯೋಧನ ದ್ರೌಪದಿಯ ವಸ್ತ್ರಾಪಹರಣವನ್ನು ಮಾಡುತ್ತಿರುವಾಗ, ಸಭೆಯಲ್ಲಿ ಹಿರಿಯರೆಲ್ಲರೂ ಮೌನ. ಆಗ ಸೂರ್ಯಪುತ್ರ ಕರ್ಣನ ಆಕ್ಷೇಪಣೆ ನಿಜ, ಅವನ ಒಡೆಯ ದುರುಯೋಧನ ಮಾತು ಮೀರುವಂತಿಲ್ಲ. ಹೀಗೆ ಪೌರಾಣಿಕ ಕಾಲದಲ್ಲಿದ್ದ ಹಲವು ಪ್ರಸಂಗಗಳನ್ನು ವಿಜಯಾ ಸುಬ್ಬರಾಜ್ ರವರು ತಮ್ಮ ಕವಿತೆಗಳಲ್ಲಿ ಸ್ಪಷ್ಟ ಪಡಿಸಿದ್ದಾರೆ.

ಮುಂಡೆಯಾದ ಮೇಲೆ
ಭಾನುಮತಿಯ ಬಸಿರು ಕಮ್ಮಾರ ಕುಲುಮೆ
ಇದ್ದೊಬ್ಬ ಗಂಡನೂ ಇಲ್ಲದಾದಾಗ
ಐವರಪ್ಪುಗೆಯ ಸುಖದ ದ್ರೌಪದಿಯು

ಕುರುಕ್ಷೇತ್ರ ಯುದ್ಧದ ನಂತರ ಭಾನುಮತಿಯ ಸ್ಥಿತಿ, ದ್ರೌಪದಿಯ ನೆನೆದು ಕಮ್ಮಾರಾದ ಕುಲುಮೆಯಂತೆಯಾಗಿದೆ. ಇವಳು ವಿಧವೆ, ಇದ್ದೊಬ್ಬ ಗಂಡ ಇನ್ನಿಲ್ಲ ದ್ರೌಪದಿಗೆ ಒಂದಡೇ ಯುದ್ಧದಲ್ಲಿ ವಿಜಯೋತ್ಸವ, ಮತ್ತೊಂದೆಡೆ ಐವರು ಗಂಡಂದಿರ ಸಿಂಹಾಸನದ ರಾಣಿ.

ಉರಿವ ಕಿಚ್ಚು
ಕುರುಭೂಮಿ ಕೆಸರಲ್ಲಿ
ಅಂದದರಮನೆಯೊಂದು

ಮಂದಹಾಸದಿ ನಿಂತು

ಅಣುಕಿಸಿತ್ತು.

ಕೊಬ್ಬಿದ ಖಂಡಗಳನುಬ್ಬಿಸುತ್ತ

ಕಸರತ್ತಿನಲ್ಲಿ ಮಸ್ತ

ಭೀಮನೆದೆ ಮೆದುಳಲ್ಲಿ

ಬುಳ ಬುಳನೆ ಹರಿವ ಹುಳು

ಕೌರವನ ಬೀಳಿಗೆ

ಮೀಸೆ ಧ್ವಜ ಹಾರಟ.

ರಸಿಕ ರಂಡೆ ಗಂಡನಿಗೆ,

ನನ್ನವಳ ಮೇಲೆ ಅವನಿಗೆ ಕಣ್ಣು

ತಪ್ಪೇನು?

ಹಣ್ಣು ಚೆನ್ನಿದ್ದಲ್ಲಿ ಕಣ್ಣು ಚುರುಕು.

ನ್ಯಾಯದಲ್ಲಿ, ದ್ರೌಪದಿ

ನನಗೇ ಮೀಸಲು ತುತ್ತು

ಕಾಮಿನೀ ಭಾಮಿನಿಗೆ

ಕೋರ್ಟು ಹತ್ತಿದರೂ ಸರಿಯೆ ಹಕ್ಕುದಾರನಾಗಿ

ಭೀಮನು ಯುದ್ಧದಲ್ಲಿ ದುಶ್ಶಾಸನನ ಕರುಳ ಕಿತ್ತು ದ್ರೌಪದಿ ಮುಡಿಗೇರಿಸಿದ, ಪೌರುಷವನ್ನು ತೋರಿಸುತ್ತಾ ಮೀಸೆಯನ್ನೇ ಧ್ವಜದಂತೆ ಹಾರಾಡಿಸುತ್ತಿದ್ದಾನೆ. ಭಾನುಮತಿಗೆ ಈಗ ಭೀಮನ ಮೇಲೆ ಕಣ್ಣು, ಭೀಮನಿಗೆ ಭಾನುಮತಿಯ ಮೇಲೆ ಕಣ್ಣು, ತಪ್ಪೇನೋ ಎಂಬುದು ಕವಿಯ ಮನಸ್ಸು.

ಸಾಮಾನ್ಯವಾಗಿ ಎಲ್ಲಾ ಕಾಲದಲ್ಲೂ ರಾಮಯಣ ಹಾಗೂ ಮಹಾಭಾರತವಿರಲಿ, ಕಲಿಯುಗವಿರಲಿ ಹೆಣ್ಣು, ಹೊನ್ನು, ಮಣ್ಣಿನ ಮೇಲೆಯೇ ಪುರುಷನ ಕಣ್ಣು ಇರುವುದೇ ಪುರುಷತ್ವ ಎಂದು ಭಾವಿಸಿದ್ದಾರೆ. ಹೀಗೆ ಕೆಲವು ಶಬ್ದಗಳು ಕೋರ್ಟು. ಕಛೇರಿ. ಡೈವೊರ್ಸ್ ಪದಗಳು ಮೊದಲು ಮನೆಯೊಳಗೆ ಮಾನಹರಣ, ಈಗ ಸಾರ್ವಜನಿಕರ ಮುಂದೆ. ಪತ್ರಿಕೆಗಳಲ್ಲಿ ವಾದ ವಿವಾದಗಳಲ್ಲಿ ಮತ್ತೆ ಮತ್ತೆ ದ್ರೌಪದಿಯರಿಗೆ ಮಾನಹರಣ.

ಅಣ್ಣನಲಿ ಪಾಲು– ಪಡೆಯಬೇಕು.

ದ್ರೌಪದಿಗೆ ಗುಟ್ಟಾಗಿ ಹೇಳಬೇಕು.

ಮೊದಲೆ ಕಾಳ್ಗಿಚ್ಚು.

ಭೀಮ ಬೆಂಬಲಗಾಳಿ ಬೀಸಿದ್ದೆ ತಡ

ಭುಗಿಲೆದ್ದು,

ಉಳಿದವರ ಹಿಜಡಾತನಕೆ

ಹೇಸಿಗೆ ಪಟ್ಟು,

ಮೂಕ ಸಮ್ಮತಿಯಲ್ಲಿ

ಸೋಡ ಚೀಟಿ ಬರೆದು

ನಡೆದವಳಪ್ಪುಗೆಗೆ,

ಭೀಮ ಬಾಹುಗಳ ಭದ್ರ-

ಕೋಟೆಯೊಳಗೆ.

ಭೀಮನಿಗೆ ಅಣ್ಣನಲ್ಲಿ ಪಾಲು ಪಡೆಯಬೇಕು ದ್ರೌಪದಿಯನ್ನು. ಇದು ದ್ರೌಪದಿಗೆ ಗುಟ್ಟು. ಈಗಿನ ದ್ರೌಪದಿಯರ ಅನಿಸಿಕೆಗೆ, ಭೀಮನಂತವರು ಬೆಂಬಲದ ಗಾಳಿ ಬೀಸಿದ್ದೆ ತಡ ಈಗಿನ ದ್ರೌಪದಿಯರಿಗೆ ರಕ್ಕೆ ಪುಕ್ಕವಾಗುತ್ತಾದೆ. ಮನದೊಳಗೆ ಆಸೆ ಇದ್ದ ದ್ರೌಪದಿಗಿಂತಲೂ ಈಗಿನವರಂತೆ ಸೋಡ ಚೀಟಿ ಎಸೆದು ಭೀಮನಂತೆ ರಕ್ಷಣೆ ಕೊಡುವ ಬಾಹುಗಳ ಕಡೆ ಅದೊಂದು ಭದ್ರವಾದ ಕೋಟೆಯೆಂದು ಭ್ರಮಿಸಿ ಮತ್ತೋಮ್ಮೆ ದ್ರೌಪದಿಯಾಗುತ್ತಿದ್ದಾಳೆ, ಭಾನುಮತಿ.

ಇದ್ದೊಬ್ಬ ಗಂಡನೂ ಸತ್ತು, ಯುದ್ಧದಲೂ ಸೋತು, ಇದ್ದೊಬ್ಬ ಗಂಡನೂ ಇಲ್ಲವಾದಗ, ಮಕ್ಕಳನ್ನು ಕಳೆದು, ಬಸಿರು ಬರಿದು, ಆಶ್ರಯವಿಲ್ಲ ಆದರೆ ಯೌವ್ವನ ಮಾತ್ರವಿದೆ. ಯೌವ್ವನವನ್ನೇ ಬಂಡವಾಳವಾಗಿ ಪಡೆದು ಭೀಮನಂತಿರುವ ಗಂಡನ ಹಿಂದೆ ಹೋಗುವುದೆ ಸರಿ ಎಂದು ಈಗಿನ ಭಾನುಮತಿಯರ, ದ್ರೌಪದಿಯರ ಚಿಂತೆಯಾಗಿದೆ. ಜೊತೆಗೆ ಬಹಿರಂಗವಾಗಿ ತಮ್ಮ ಅಭಿಪ್ರಾಯಗಳನ್ನು ಸಮಾಜದ ಮುಂದಿಟ್ಟು ಬದುಕುವ ಭರವಸೆಗಳು ಕಾಣುತ್ತೇವೆ. ಎಕೆಂದರೆ ಆಧುನಿಕ ಕುಂತಿಯರಿಗೆ ಗೋತ್ತು ಗುಟ್ಟು ಮುಚ್ಚಿಟ್ಟರೂ ಒಳಗೊಳಗೆ ಬಸಿರು ಚುರ್ ಎನಿಸುವುದು. ಕರ್ಣನನ್ನು ಕಂಡಾಗಲೆಲ್ಲಾ ಬಹುಶಃ ಕುಂತಿಯೂ ಯುದ್ಧ ಭೂಮಿಯಲ್ಲಿ ಸೂರ್ಯಪುತ್ರ ಕರ್ಣನ ಶವ ತೊಡೆಯ ಮೇಲಿರಿಸಿ ಕೊಂಡು ಇಡೀ ಸ್ತ್ರೀಜಾತಿಗೆ ಶಾಪವಿತ್ತದ್ದು ಈಗ ನಿಜವಾಗುತ್ತಾ ಇರಬಹುದು. ಯಾವ ಗುಟ್ಟು ಉಳಿಯಬಾರದು ಎಂಬ ಮಾತು ಈ ವಿಚ್ಛೇಧನ ನಿಟ್ಟನಲ್ಲಿ ಸರಿ ಎನಿಸುತ್ತದೆ. ಬೇಡದ ಗಂಡನಿಗೆ ಬಸಿರಾಗುವ ಬದಲು ಬೇಕಾದವನೂಡನೆ ಬಾಳುವುದೇ ಸರಿಯೆಂದು

ಆಧುನಿಕ ಕುಂತಿಗೆ ಮನಸಾಕ್ಷಿ ಒಪ್ಪುತ್ತಿರ ಬಹುದು. ಹೀಗೆ ದ್ರೌಪದಿಗೆ ಹೇಳುವ ಗುಟ್ಟು ಭಾನುಮತಿಗೆ ಭೀಮನನ್ನೇ ಬಿಟ್ಟುಕೊಡುವ ಮಾತು.

ಹೀಗೆ ಮಾನವನ ಪ್ರಯತ್ನಗಳು, ಆಕಾಂಕ್ಷೆಗಳು, ವೈರತ್ವ, ಮಿತೃತ್ವ ಇವೆಲ್ಲವು ಬೇಸಿಗೆಯ ಬಿರುಗಾಳಿಯಲ್ಲಿ ಹಾರಿ ಹೋಗುವ ತರಗಲೆಯಂತೆ ಕ್ಷುದ್ರವಾಗಿ ಭಾಸವಾದರೂ ಅಂಥ ಪ್ರಯತ್ನ ಪಟ್ಟ ವ್ಯಕ್ತಿಗಳು, ಆಕಾಂಕ್ಷೆ ಹೊಂದಿದ ವ್ಯಕ್ತಿಗಳು ನಮ್ಮ ಹೃದಯದಾಳದಲ್ಲಿ ಸತತ ಸಂವೇದನೆಯನ್ನುಂಟು ಮಾಡುತ್ತಾರೆ.

ಪ್ರತಿಯೊಬ್ಬ ಮಾನವನಿಗೂ ಒಂದಲ್ಲ ಒಂದು ರೀತಿ ಅನ್ವಯಿಸುವ ಮತ್ತು ಮಾರ್ಗದರ್ಶಕವಾಗಿರುವ ಕಾವ್ಯಗಳು ಒಂದಲ್ಲಾ ಒಂದು ರೀತಿಯಲ್ಲಿ ಮಾನವೀಯ ಮೌಲ್ಯಗಳು, ಬದುಕಿನ ನೈಜ್ಯತೆಯನ್ನು ತಿಳಿಸುತ್ತದೆ. ಹೀಗೆ ಮನುಷ್ಯ ಜಗತ್ತಿಗೆ ಸಹಜವಾದ ವೈಚಾರಿಕ ತುಮುಲುಗಳನ್ನು ಆಂತರಿಕ ದ್ವಂದ್ವಗಳನ್ನು, ರಾಗದ್ವೇಷಗಳ ಚರಿತ್ರೆಯನ್ನು ಗ್ರಹಿಸಿಕೊಂಡು ಬದುಕಿನ ಸಂಕೀರ್ಣತೆಯನ್ನು ವಿಶ್ವಮಟ್ಟದಲ್ಲಿ ಹಿಡಿದಿಟ್ಟಿರುವ ಪ್ರಾಚೀನ ಕೃತಿಗಳಲ್ಲಿ ಮಹಾಭಾರತವೂ ಒಂದಾಗಿದೆ.

## ಅಧ್ಯಾಯ 6

## ಇತರ ಪ್ರಕಾರಗಳಲ್ಲಿ ದ್ರೌಪದಿ

ಮಹಾಭಾರತ ಉದ್ದಕ್ಕೂ ತುಂಬಿರುವ ಅತಿಮಾನುಷ ಘಟನೆಗಳನ್ನು ಸಂಭವನೀಯವಾದ ದೃಷ್ಟಿಯಿಂದ ಪುನಾರಚಿಸುವ ಕಾರ್ಯ ಮತ್ತೆ ಮತ್ತೆ ಶೋಧನೆಗೆ ಒಳಗಾಗುತ್ತಲೇ ಬಂದಿದೆ. ಮಹಾಭಾರತದಲ್ಲಿ ಪಾತ್ರಗಳ ಅತಿಮಾನವೀಯ ಪೊರೆಯನ್ನು ಕಳಚಿ ಅವುಗಳನ್ನು ಸಾಮಾನ್ಯ ಮಾನವೀಯ ಭೂಮಿಗೆ ತಂದು ಆಧುನಿಕ ಸಂಧರ್ಭದಲ್ಲಿ ಹಲವು ಲೇಖನಗಳು, ವಿಮರ್ಶೆಗಳು, ಹಾಗೂ ಪ್ರಬಂಧ ಸಂಕಲನಗಳು ನಿರ್ವಚಿಸಿವೆ.

<u>ದ್ರೌಪದಿಯ ಛಲಸಾಧನೆ</u>

ಗಾಯಿತ್ರಿಯವರು ದ್ರೌಪದಿಯ ಛಲಸಾಧನೆ ಎಂಬ ಲೇಖನದಲ್ಲಿ ದ್ರೌಪದಿಯು ಛಲದಿಂದಲೇ ಯಾವ ರೀತಿ ಪತಿಭಟಿಸುವ ಕಾರ್ಯದಲ್ಲಿ ತನ್ನ ಸೇಡನ್ನು ತೀರಿಸಿಕೊಳ್ಳುವಳು, ಎಂಬುದನ್ನು ನೋಡಲಾಗಿದೆ. ವಿಶ್ವಕೋಶವೆನಿಸಿರುವ ಶ್ರೀ ವ್ಯಾಸಮಹರ್ಷಿಯಿಂದ ವಿರಚಿತವಾದ ಮಹಾಭಾರತದಲ್ಲಿನ ಪಾತ್ರ ಪ್ರಪಂಚವೇ ಒಂದು ವಿಶಿಷ್ಟ ಪ್ರಕಾರವಾದುದು. ಈ ಮಾಹಾಕೃತಿಯ ಮಹಾನಾಯಕಿಯೇ ದ್ರೌಪದಿ. ದ್ರೌಪದಿಯು ಸಮಗ್ರ ಮಹಾಭಾರತದ ಕಥೆಯ ಸೂತ್ರಧಾರಿಣಿಯೆನ್ನಬಹುದು. ಏಕೆಂದರೆ, ವಿಶ್ವದಲ್ಲಿನ ಯಾವುದೇ ಘಟನೆ, ಪ್ರಸಂಗ ಅಥವಾ ಸಾಹಿತ್ಯವಲ್ಲಿನ ನಾಯಕಿಯರಿಗಿಂತ ಅದ್ವಿತೀಯವಾದುದು ದ್ರೌಪದಿಯ ಪಾತ್ರ.

ದ್ರೌಪದಿಯ ಪಾತ್ರವನ್ನು ಕುರಿತ ಪೂರ್ವಾಗ್ರಹ ಪೀಡಿತವಾದ ಅನೇಕ ಅಭಿಪ್ರಾಯಗಳು ಇಂದಿಗೂ ಪ್ರಚಲಿತದಲ್ಲಿವೆ. ದ್ರೌಪದಿಯೆಂದರೆ ಛಲಗಾತಿ, ಕಲಹಪ್ರಿಯೆ, ವಾಚಾಳಿ, ಗರ್ವಿಷ್ಠೆ, ರೋಷಯುಕ್ತೆ, ಕಠೋರ ಹೃದಯಿ, ಐವರು ಪತಿಯಂದಿರನ್ನುಳ್ಳವಳು, ಅನೇಕರ ಹತ್ಯೆಗೆ ಕಾರಣಭೂತಳು ಇತ್ಯಾದಿ ತಪ್ಪು ಕಲ್ಪನೆಗಳಿವೆ. ಇವಳ ಪಾತ್ರದ ಮಹಿಮೆ, ಓರಿಮೆ ಮತ್ತು ಗರಿಮೆಗಳ ಅರಿವಾಗುವುದು ಪೂರ್ವಾಗ್ರಹರಹಿತ ಮತ್ತು ವಿಶಾಲದೃಷ್ಟಿ ಯುಕ್ತವಾದ ವಿಶ್ಲೇಷಣೆ ಮಾತ್ರದಿಂದಲೇ. ಈ ವಿಶ್ಲೇಷಣೆಯಲ್ಲಿ ನಾವು ಸಾವಧಾನದಿಂದ ಪರಾಮರ್ಶಿಸಬೇಕಾಗಿರುವ ವಿವಿಧ ಸ್ತರಗಳಲ್ಲಿನ ಪ್ರಮುಖಾಂಶಗಳೆಂದರೆ:–

ದ್ರೌಪದಿಯ ಜನಪದ ಹಿನ್ನೆಲೆ ವಿವಾಹ

ದ್ಯೂತ ಪ್ರಕರಣ – ಶಪಥ – ರೂಪ ಲಾವಣ್ಯಗಳು

ಛಲ ಸಾಧನೆಯ ಸಿದ್ಧಿ

ಪ್ರಪ್ರಥಮವಾದ ಗಮನಾರ್ಹ ಅಂಶವೆಂದರೆ, ದ್ರೌಪದಿಯ ಜನನದ ಹಿನ್ನೆಲೆಯಲ್ಲಡಗಿರುವ ಛಲ, ಆ ಛಲಕ್ಕೆ ಪಾಂಚಾಲ ದೇಶದ ರಾಜ ದ್ರುಪದನು ದ್ರೋಣಾಚಾರ್ಯರ ಮೇಲಿನ ದ್ವೇಷದಿಂದ ಮಾಡಿದ ಸಂಕಲ್ಪ.

ಅರ್ಜುನನಿಗೆ ವಧುವಾಗುಂತಹ ಪುತ್ರಿ ಮತ್ತು ದ್ರೋಣರನ್ನು ವಧಿಸುವಂತಹ ಪುತ್ರನನ್ನು ಪಡೆಯುವುದಕ್ಕಾಗಿ, ಛಲಯುಕ್ತ - ಸಂಕಲ್ಪದಿಂದ ದ್ರುಪದ ಮಹಾರಾಜನು ಮಾಡಿದ ಯಾಗದ ಫಲದಿಂದ ಹುಟ್ಟುವುದೇ ಈ ದ್ರೌಪದಿ.

"ದ್ರೌಪದಿಯು ರೂಪಲಾವಣ್ಯಾದಿ ಗುಣಗಳಲ್ಲಿ ಅಸಮಾನ್ಯಳಾಗಿದ್ದಳು. ಧರ್ಮಚಾರಿಣೀ, ಧರ್ಮಜ್ಞಾ, ಧರ್ಮದರ್ಶಿನೀ ಕೃಷ್ಣ, ಶುಚಿಸ್ಮಿತಾ, ಸುಕೇಶಿನೀ, ಸತ್ಯವಾದಿನೀ, ಪಾಂಚಲೀ, ಯಾಜ್ಞಸೇನೀ, ಮನಸ್ವಿನೀ, ಪತಿವ್ರತಾ ಶ್ರೀ ಸಮಾನಾ ಮುಂತಾದ ಮುಂತಾದ ವಿಶೇಷಣಗಳು ದ್ರೌಪದಿಯ ಸೌಂದರ್ಯಾತಿಶಯಂತೆ, ಗಾಂಭೀರ್ಯ, ಔದಾರ್ಯ, ಸೌಜನ್ಯತೆ ಇತ್ಯಾದಿ ಕಲ್ಯಾಣ ಗುಣಗಳ ರಾಶಿಯನ್ನೇ ನಮಗೆ ಪರಿಚಯಿಸುತ್ತದೆ."(*1)

ಛಲ ಸಾಧನೆಗಾಗಿ ದ್ರೌಪದಿಯು ಯಾವ ರೀತಿಯ ಕ್ರಮಗಳನ್ನು ಅನುಸರಿಸಿದಳೆಂಬುದು ಮುಂದಿನ ಹಂತ. ದ್ರೌಪದಿಯು ಏತಕ್ಕಾಗಿ ಕಠೋರ ಪ್ರತಿಜ್ಞೆಗಳನ್ನು ಮಾಡಿದಳು ಮತ್ತು ಛಲವನ್ನು ಬಿಡದೆ ಸಾಧಿಸಿದಳೆಂಬುದು ತತ್ತ್ವದಲ್ಲಿ ಗಮನಾರ್ಹ. ಮಹಾನಾಯಕಿಯರಾದಂತಹ ಸೀತಾ, ದಮಯಂತೀ, ಅಹಲ್ಯಾ, ತಾರಾ, ಶಕುಂತಲೆಯರ ಶ್ರೇಣಿಯಲ್ಲಿ ದ್ರೌಪದಿಯಷ್ಟು ಕ್ಲೇಶಕ್ಕೊಳಗಾದವರು ಯಾರು ಇಲ್ಲವೆನ್ನಬಹುದು.

ಸಾಮಾನ್ಯವಾಗಿ ರಾಮಾಯಣದ ನಾಯಕಿಯಾದ ಸೀತೆಯನ್ನು ಕುರಿತ ಅನುಕಂಪದ ನುಡಿಗಳು ಕೇಳಿ ಬರುತ್ತವೆ. ಸೀತೆ ಮತ್ತು ದ್ರೌಪದಿಯರ ಪಾತ್ರಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ, ಸೀತೆಯ ಸ್ಥಿತಿಯು ದ್ರೌಪದಿಯ ಸ್ಥಿತಿಯಷ್ಟು ಶೋಚನೀಯವಲ್ಲವೆಂಬ ಒಂದು ಸತ್ಯ ಸಂಗತಿಯ ಅರಿವಾಗುತ್ತದೆ.

ಮಹಾ ಸತ್ವಶಾಲಿಗಳಾದ ಪತಿಯಂದಿರ ಸಮ್ಮುಖದಲ್ಲೇ ತುಂಜಿದ ಸಭೆಯಲ್ಲುಂಟಾದ ಘೋರ ಅಪಮಾನ, ಅಸಹಾಯಕಳಾದ ಇವಳು ಆಗ ತನ್ನನ್ನು ತಾನೆ ರಕ್ಷಿಸಿಕೊಳ್ಳಬೇಕಾಯಿತು.

ಅರಣ್ಯವಾಸದ ಸಮಯದಲ್ಲಿ ಸೈಂಧವನಿಂದ ಅಪಹೃತಳಾದಳು. ಅಜ್ಞಾತವಾಸದ ಅವಧಿಯಲ್ಲೂ ಸಾಮ್ರಾಜ್ಞಿಯಾಗಿದ್ದರೂ, ಸೈರಂಧ್ರಿಯಂತೆ ವಿರಾಟರಾಜನ ಅರಮನೆಯಲ್ಲಿ ಜೀವನ ನಡೆಸಬೇಕಾಯಿತು. ಪುನಃ ತುಂಜಿದ ಸಭೆಯಲ್ಲಿ ದುಷ್ಟ ಕೀಚಕನಿಂದ ಪಾದ ಪ್ರಹಾರದ ಅಸಹ್ಯಕರವಾದ ತೀವ್ರ ಅವಮಾನಕ್ಕೊಳಗಾಗುವಳು. ದ್ರೌಪದಿಯ ಪ್ರತೀಕಾರದ ಛಲದ ಪ್ರಚೋದನೆಗೆ ಕೇಂದ್ರಬಿಂದು ದ್ಯೂತ ಪ್ರಕರಣವೆ. ಇವಳ ಛಲಸಾಧನೆಯ ತತ್ತ್ವವನ್ನು ಸ್ಪಷ್ಟವಾಗಿ ತಿಳಿಯಲು ಜೂಜಿನ ಸೂಕ್ಷ್ಮ ಪ್ರಕರಣವೇ ಕಾರಣವಾಗುವುದು. ಹೀಗೆ ಒಂದೇ ಎರಡೇ ದ್ರೌಪದಿಗೆ ಒದಗಿ ಬಂದ ಕಷ್ಟಕಾರ್ಪಣ್ಯಗಳು.

---

(*1 ದ್ರೌಪದಿಯ ಛಲಸಾಧನೆ ಡಾ. ಪ್ರ ಕೃ ಗಾಯಿತ್ರೀ ಪು ಸ.9)

ಇಷ್ಟೆಲ್ಲಾ ಕ್ಲೇಶಗಳಿಗೀಡಾಗಿದ್ದರೂ, "ಪತಿಯಂದಿರ ಮತ್ತು ಗುರುಹಿರಿಯರ ವಿಷಯದಲ್ಲಿ ಹಿತಕರವಾಗಿಯೇ ನಡೆದುಕೊಳ್ಳುತ್ತಿದ್ದರು. ದ್ರೌಪದೀ ಅವಮಾನಗಳನ್ನು ಸಹಿಸದೆ, ಸೀತೆಯಿಂದ ಇವಳೇನಾದರೂ ಅಗ್ನಿಪ್ರವೇಶವನ್ನೋ ಅಥವಾ ಆತ್ಮಾರ್ಪಣೆ ಮಾಡಿದ್ದರೆ ಬಹುಶಃ ಮಹಾಭಾರತ ಸಂಗ್ರಾಮವೇ ನಡೆಯುತ್ತಿರಲಿಲ್ಲವೇನೊ !!! ಕಾರಣವೇನೆಂದರೆ ಪ್ರಪಂಚದಲ್ಲಿನ ಯಾವ ಸ್ತ್ರೀಯೂ ಅನುಭವಿಸದಂತಹ ಕಷ್ಟಕೋಟಲೆಗಳನ್ನು ಮತ್ತು ಮಾನಸಿಕ ವ್ಯಥೆಯನ್ನು ದ್ರೌಪದಿಯು ಅನುಭವಿಸಿದಳು. ಅನೀತಿ, ಅನಾಚಾರ ಮತ್ತು ಅಸಭ್ಯತೆಗಳಿಗೆ ಬಲಿಯಾದ ನಾರಿಯ ಆಕ್ರೋಶದ ಅಗ್ನಿಗೆ ಎಲ್ಲರೂ ಆಹುತಿಯಾದುದು ಸಹಜವೇ. ಇಂತಹ ತೀವ್ರಶೋಕವನ್ನು ಸಹಿಸಿದ ದ್ರೌಪದಿಯ ಮನೋದಾರ್ಢ್ಯ ಊಹಿಸಲಸಾಧ್ಯವಾದುದು."(*2)



ಈ ಮೇಲೆ ವಿವೇಚಿಸಿದ ನೆಲೆ ಹಿನ್ನೆಲೆಯಲ್ಲಿಯೇ ದ್ರೌಪದಿಯ ಫಲಸಾಧನೆಯ ತತ್ವವಡಗಿದೆ. ಫಲ ಸಾಧನೆಯ ಪ್ರತೀಕವೇ ದ್ರೌಪದಿ. ದ್ರೌಪದಿ ಅಗ್ನಿಪುತ್ರಿಯಾದರೆ, ಭೀಮನು ವಾಯುಪುತ್ರ. ಈ ಎರಡು ಪ್ರಮುಖ ಪಾತ್ರಗಳ ಸಾಮಾನ್ಯ ವೈಶಿಷ್ಟ್ಯತೆಯೆಂದರೆ ವೀರಸತ್ಯಾಗ್ರಹ. ಅನೀತಿ, ಅಧರ್ಮ ಮತ್ತು ಅವ್ಯವಹಾರಗಳಿಗೆ ವಿರುದ್ಧವಾಗಿ ದೋಷದಿಂದೇಳುವ ವ್ಯಕ್ತಿಗಳೆಂದರೆ ಸಂಪೂರ್ಣ ಮಹಾಭಾರತದಲ್ಲಿ ಇವರಿಬ್ಬರೆಂದೇ ಹೇಳುವುದು ಸೂಕ್ತವಾಗುತ್ತದೆ. ಏಕೆಂದರೆ, ಭೀಮ ದ್ರೌಪದಿಯರಿಲ್ಲದ ಮಾಹಾಭಾರತವೆಲ್ಲಿಯದು? ಮಹಾಸತ್ವಶಾಲಿಯಾದ ಭೀಮನು ಅನೇಕ ಉತ್ಕಟ ಪರಿಸ್ಥಿತಿಗಳಲ್ಲಿ ಪಾಂಡವರನ್ನು ರಕ್ಷಿಸದಿದ್ದಲ್ಲಿ ಪಾಂಡವರ ಅಸ್ತಿತ್ವವೇನಾಗುತ್ತಿತ್ತೋ? ಎಂಬ ಸಂದೇಹ ಮೂಡುತ್ತದೆ. ದ್ರೌಪದಿಯು ಪ್ರೇರಕ ಶಕ್ತಿಯಾದರೆ, ಭೀಮನು ಕ್ರಿಯಾಶಕ್ತಿ.

ಅಲ್ಪವೂ ಅಲ್ಲದ ಅತ್ಯಂತ ದೊಡ್ಡವಲ್ಲದ ಆಕಾರವುಳ್ಳ, ಸುಂದರ ವರ್ಣವುಳ್ಳ, ಕೆಂಪು ವಸ್ತ್ರಧಾರಣೆಯಾಗಿರುವ, ನೀಲೋತ್ಪಲದಂತೆ ಕಣ್ಣುಗಳುಳ್ಳ, ಕಮಲದಂತೆ ಸುಗಂಧಮಯ ನಿಶ್ವಾಸವುಳ್ಳ, ರೂಪದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಗೆ ಸಮಾನಳಾಗಿರುವಂತಹ ಇವಳನು ಪಣವಾಗಿಟ್ಟು ನಿನ್ನೊಡನೆ ಆಡುವೆನು.

ಪೂರ್ವಾಪರ ವಿವೇಚನೆಯಿಲ್ಲದೆ ಧರ್ಮರಾಯನು ಕುಲವಧುವಾದ ದ್ರೌಪದಿಯನ್ನು ಪಣವಾಗಿಡಲು, ಆ ಕುರು ಸಭೆಯಲ್ಲಿ ಉಪಸ್ಥಿತರಾಗಿದ್ದಂತಹ ವೃದ್ಧರೆಲ್ಲರೂ, ಹಿರಿಯರೆಲ್ಲರೂ, ಸಭ್ಯರೆಲ್ಲರೂ, ಧಿಕ್ಕಾರ ! ಧಿಕ್ಕಾರ !ವೆಂದು ಉದ್ಗಾರ ಮಾಡಿದರೆಂದು ವರ್ಣಿತಲಾಗಿದೆ. ಎಂತಹ ಜೂಜುಕೋರನೂ ತನ್ನ ಪತ್ನಿಯನ್ನು ಈ ರೀತಿಯಲ್ಲಿ ಪಣವಾಗಿಟ್ಟಿರಲಾರನು ! ದ್ಯೂತದ ವಿವಶತೆಯಿಂದ ಭ್ರಾಂತನಾದವನಿಗೆ, ಒಂದು ಅಚೇತನ ವಸ್ತುವಿಗೂ ಮತ್ತು ಜೀವಂತ ವ್ಯಕ್ತಿಗೂ ಮಧ್ಯೆ ಇರುವ ಅಂತರ ತಿಳಿಯಲು ಹೇಗೆ ಸಾಧ್ಯ?

---

(*2 'ದ್ರೌಪದಿಯ ಫಲ ಸಾಧನೆ' ಪು. ಸ. 12)

ಇಷ್ಟಕ್ಕೇ ಮುಗಿಯಲಿಲ್ಲ ದ್ಯೂತ ಕ್ರೀಡೆ. "ದುಷ್ಟ ದುರ್ಯೋಧನ ಆಜ್ಞೆಯ ಮೇರೆಗೆ ನೀಚ ದುಃಶ್ಯಾಸನನು ದ್ರೌಪದಿಯ ಮುಡಿಹಿಡಿದೆಳೆದು ತುಂಬಿದ ಸಭೆಗೆ ಕರೆತರುತ್ತಾನೆ. ಒಬ್ಬ ದಾಸಿಯನ್ನೂ ಕೂಡ ಸಭ್ಯರು ಹೀಗೆ ಅವಮಾನಪಡಿಸುವುದಿಲ್ಲ. ಆದರೆ, ಮುಂದಿನ ಪ್ರಕರಣ !!! ಸಮಸ್ತ ಮಾನವ ಜನಾಂಗವೇ ತಲೆ ತಗ್ಗಿಸುವಂತ ದಾರುಣ ದೃಶ್ಯ ಎಂತಹ ವಿಷಮ ಪರಿಸ್ಥಿತಿ! ದ್ರೌಪದಿಯು ತನ್ನನ್ನು ತಾನೇ ರಕ್ಷಿಸಿಕೊಳ್ಳಬೇಕಾದಂತಹ ಅಬಲೆಯು ಸಬಲೆಯಾಗುವ ಸಂದರ್ಭ ಒದಗಿಬಂದಿತ್ತು. ದ್ರೌಪದಿಗಾದ ಅವಮಾನವು ಕೇವಲ ವ್ಯಕ್ತಿಗತವಲ್ಲ. ಭರತ ವಂಶದ ಮಾನ ಗೌರವಗಳೆಂಬ ಪರದೆಯ ನಾಶ ಎಂಬ ಸತ್ಯವನ್ನು ನಾವೆಲ್ಲರೂ ಅರಿಯಲೇಬೇಕು."

ಇಷ್ಟಕ್ಕೇ ಮುಗಿಯಲಿಲ್ಲ. ದ್ರೌಪದಿಯ ಶೋಷಣೆ. ಕರ್ಣ ಮತ್ತು ದುರ್ಯೋಧನರ ಚುಚ್ಚು ಮಾತುಗಳಿಗೀಡಾಗುವಳು. ಘೋರ ಅವಮಾನಕ್ಕೆ ಬಲಿಯಾಗಿದ್ದರೂ, ದ್ರೌಪದಿಯ ಸಮಯ ಸ್ಫೂರ್ತಿ, ಆತ್ಮಸ್ಥೈರ್ಯ, ಧರ್ಮಸೂಕ್ಷ್ಮತೆ ಮತ್ತು ವ್ಯವಹಾರ ಕೌಶಲ್ಯಗಳು ಶ್ಲಾಘನೀಯವಾದವು.

ಹೀಗೆ ದ್ರೌಪದಿಯೂ ತನ್ನ ಬದುಕಿನಲ್ಲಿ ಅನೇಕ ಕಷ್ಟಗಳನ್ನು ಅನುಭವಿಸುತ್ತಾಳೆ. ಆಕೆ ಪಡೆದ ಕಷ್ಟಕೋಟಲೆಗಳಿಂದ ನಮಗೆ ಆಕೆಯ ಮೇಲೆ ಕರುಣೆ ಹುಟ್ಟುತ್ತದೆ.

**ಶೃಂಗಾರ ವಿಹಾರ (ಕೀಚಕ ವಿಲಾಸ)**

ಈ ಲೇಖನದಲ್ಲಿ ದ್ರೌಪದಿಯು ತನ್ನ ಇಡೀ ಜೀವನವನೇ ನೋವಿನಿಂದಲೇ ಕಳೆದರೂ, ಅವಳ ನೋವಿಗೆ ಕಾರಣರಾದವರ ಬಗ್ಗೆ ಸೇಡನ್ನು ತೀರಿಸಿ ಕೊಳ್ಳುತ್ತಾಳೆ. ಇವಳನ್ನ ಕಾಡಿಸುವ ಕೀಚಕನನ್ನು ಭೀಮ ಹೇಗೆ ಅವನನ್ನು ನಾಶ ಮಾಡುತ್ತಾನೆ, ಎಂಬುದನ್ನು ಈ ಲೇಖನದ ಮೂಲಕ ನೋಡಬಹುದಾಗಿದೆ.

ಮಹಾಭಾರತದ ಕಥೆಯನ್ನು ಅರಿಯದವರಾರು? ಕನ್ನಡದಲ್ಲಿ ಕಾವ್ಯಕೆ ಗುರುವೆನಲು ರಚಿಸಿದ ಕುಮಾರ ವ್ಯಾಸಭಾರತವ. ಅದು ಅವನ ಅಗ್ಗಳಿಕೆ. ಕನ್ನಡ ಭಾರತ ನಿಜವಾಗಿಯೂ ನವರಸಗಳ ತುಂಬುಹೊಳೆ. ಕವಿಯೇ ಹೇಳಿಕೊಂಡಿರುವಂತೆ ಅವನ ಕಾವ್ಯ "ವಿರಹಿಗಳ ಶೃಂಗಾರ" ವೂ ಹೌದು. ಕೀಚಕನ ವೃತ್ತಾಂತದಲ್ಲಿ ಆ ಶೃಂಗಾರ ಬಹು ಸೊಬಗುವಡೆದಿದೆ. ಆ ಸೊಬಗನ್ನು ಮನಗಾಣಿಸುವುದೇ ಈ ಲೇಖನದ ಉದ್ದೇಶ.

ಪಾಂಡವರು ಹನ್ನೆರಡು ವರ್ಷಗಳ ವನವಾಸವನ್ನು ಮಾಡಿ ಅಜ್ಞಾತವಾಸಕ್ಕಾಗಿ ವಿರಾಟರಾಜನ ಮತ್ಸ್ಯನಗರವನ್ನು ಆಯ್ದುಕೊಂಡು ವೇಷವನ್ನೂ ಹೆಸರನ್ನೂ ಮರೆಸಿಕೊಂಡು ವಿರಾಟೇಶ್ವರನನ್ನು ಓಲೈಸಿಕೊಂಡಿದ್ದರು. ಇದರಲ್ಲಿ ದ್ರೌಪದಿಯ ಪಾತ್ರ ಮಾನಿನಿಯರ (ರಾಣಿಯರ) ಸಿರಿಮುಡಿಯ ಕಟ್ಟುವ ಸೈರಂಧ್ರಿಯಾದಳು. ಹೀಗೆ ಪರಸೇವೆಯಲ್ಲಿ ಪಾಂಡವರ ಹತ್ತು ಮಾಸಗಳನ್ನು ಸುಗಮವಾಗಿ ಕಳೆದರು.

ವಿರಾಟನರಸಿಯಾದ ಸುದೇಷ್ಣೆಯ ತಮ್ಮನೂ, ಅತುಳ ಭುಜಬಲನೂ ಆದ ಕೀಚಕನು ಆಕೆಯ ಮಂದಿರಕ್ಕೆ ಬಂದನು. ಹಾಗ ಅಲ್ಲಿದ್ದ ದಾಸಿಯರಲ್ಲಿ ಸೈರಂಧ್ರಿಯಾಗಿದ್ದ ದ್ರೌಪದಿಯನ್ನು ಕಂಡು ಮೋಹಿಸಿದನು. ಅವಳ ದೇಹ ಸೌಂದರ್ಯವನ್ನು ನೋಡಿದ ಕೀಚಕ ಅವಳನ್ನು ಹೇಗಾದರೂ ಮಾಡಿ ತನ್ನ ಬಳಿ ಸೆಳೆದುಕೊಳ್ಳಲು ನಿರ್ಧರಿಸಿತ್ತಾನೆ.

ಇವಳು ಯಾರ ಸತಿ ! ಕೊನೆಗಡಿಕ ಕಂದರ್ಪನ ಕೊರಲಗೊ ! ಮದನನ ಸೊಕ್ಕಿದಾನೆಯೋ ! ಜಗತ್ತನ್ನು ಕೆಡವಲು ಬ್ರಹ್ಮನು ಜಿಗಿದ ಬಲೆಯೋ? ಎಂದು ಆಶ್ಚರ್ಯಗೊಂಡು ಕೀಚಕನು ಸೈರಂಧ್ರಿಯ ಚೆಲುವನ್ನು ಚಪ್ಪರಿಸುತ್ತ ಅವಳನ್ನು ಅಳುಪಿ ನೋಡಲು, ಕಾಮನ ಬಾಣಗಳು ಅವನ ಎದೆಯಲ್ಲಿ ನಾಟಿದವನು. ನೆಟ್ಟ ದೃಷ್ಟಿಯನ್ನು ತೆಗೆಯಲರಿಯದೆ ಅವನು ಪಾತಕವನ್ನು ನೆನೆದನು.
ಅದೇ ಬೆರಗಿನ ಭಾವದಲ್ಲಿ ಇವಳಾರೆಂದು ಭಾವಿಸಿ ಕೆನ್ನೆಯ ಮೇಲೆ ಕೈಯಿಟ್ಟು ನೋಡುತ್ತ ನಿಂತನು. ದ್ರೌಪದಿಯನ್ನು ಮನಸ್ಸಿನಲ್ಲಿಯೇ ಸೆರೆಹಿಡಿದು ನೋಟದಲ್ಲಿ ನುಂಗಿದನು.

"ದ್ರೌಪದಿಯನ್ನು ಪಡೆಯಬೇಕಾದರೆ ನನ್ನ ಅಕ್ಕ ಸುದೇಷ್ಣೆಯನ್ನು ಮೊದಲು ಹಿಡಿಯಬೇಕು ಎಂದು ನಿರ್ಧರಿಸಿ ಅಕ್ಕನ ಬಳಿಗೆ ಬಂದು, ಅಕ್ಕ ನನ್ನದೊಂದು ಬಿನ್ನಹ. ನಿಮ್ಮ ಓಲೆಕಾತಿಯರೊಳಗೆ ಮಿಂಚಿನ ಮೇಲುಗೈಯಾದ ಇವಳಾರು? ಆಗ ಸುದೇಷ್ಣೆ ಇವಳು ಗಂಧರ್ವರ ರಮಣಿ. ಮಾನ್ಯ ವೃತ್ತಿಯಲ್ಲಿದ್ದು ನಮ್ಮವಳಂತೆಯೇ ಸಲಹುತ್ತಿರುವೆನು. ಇವಳ ವಲ್ಲಭರು ಬಲಿಷ್ಠರು. ಸುಮ್ಮನೆ ನಿನ್ನ ಬಿಡಾರಕ್ಕೆ ಹೋಗು ಇವಳು ನಿನಗಾಗತಕ್ಕವಳಲ್ಲ. ಮರುದಿವಸ ಮತ್ತೆ ಕಾಣಿಸಿಕೊಂಡು ಅರಮನೆಯ ಬಾಗಿಲಲ್ಲಿ ದ್ರೌಪದಿಯನ್ನು ಕಂಡನು. ಸಿಂಹದ ಸತಿಯನ್ನು ಒಲಿದು ನರಿ ಬರುವ ರೀತಿಯಲ್ಲಿ ದ್ರೌಪದಿಯನ್ನು ಸಮೀಪಿಸಿದನು. ಅವಳ ರೂಪ ಎಣೆಯಿಲ್ಲದುದಾಗಿ ಕಂಡಿತವನಿಗೆ ಸೈರಂಧ್ರಿಯೇ ದ್ರೌಪದಿ ಎಂದು ಅವನು ಅರಿವುಗೊಂಡಿದ್ದರೆ ಅವಳನ್ನು ಕಾಮಿಸುತ್ತಿರಲಿಲ್ಲವೋ ಏನೋ ! ವಿಧಿ ಅವನನ್ನು ವಂಚಿಸಿತು. ಕಾಮ ಪರವಶನಾದ ಕೀಚಕನು ದ್ರೌಪದಿಯನ್ನು ಬಗೆಬಗೆಯಲ್ಲಿ ಬೇಡಿಕೊಂಡನು. ಅವನ ಮಾತುಗಳನ್ನು ಕೇಳಿ ದ್ರೌಪದಿ ಕಿವಿಯನ್ನು ಮುಚ್ಚಿಕೊಂಡಳು. ಪತಿಯನ್ನು ನೆನೆದು ಈಶ್ವರ ಧ್ಯಾನ ಮಾಡಿದಳು. ಸೂರ್ಯದೇವನನ್ನು ನೋಡಿದಳು. ಇವನು ಖಳಾಗ್ರಣಿ. ಮೇಲುಗಾಣನು. ಈ ಮದಾಂಧನನ್ನು ಸೋಲಿಸುವವರಾರು ಎಂದು ನಡುಗಿದಳು. ಆದರೂ ಸ್ಥೈರ್ಯವನ್ನು ತಂದುಕೊಂಡು, ಹೆಚ್ಚು ಮಾತನಾಡಬೇಡ. ಅನ್ಯಾಯವಾಗಿ ಕೆಡಬೇಡ. ನೀನು ಸೋತರೇನು? ಹಾಗೆ ಸೋಲುವುದು ಮನುಜಧರ್ಮ. ಚಿತ್ತ ಚಂಚಲ. ನನ್ನ ಪತಿಗಳು ದೇವತೆಗಳಲ್ಲಿ ಬಲಿಷ್ಠರು. ಅವರಲ್ಲಿ ಯಾರೇ ಆಗಲಿ ನಿನ್ನ ಮಾತುಗಳನ್ನು ಕೇಳಿದರೂ ಸೈರಿಸುವುದಿಲ್ಲ ಎಂದು ನುಡಿದಳು. ಸೈರಂಧ್ರಿಯ ಆ ಬಲಿಷ್ಠ ಪತಿಗಳು ಯಾರೂ? ಭೀಮ ಬಲರಾಮರನ್ನು ಬಿಟ್ಟರೆ, ತನಗಿಂತಲೂ ಬಲಶಾಲಿ

ಲೋಕದಲ್ಲಿ ಉಂಟೆ? ಎಂದು ಗರ್ವದ ಗರಿಕಟ್ಟಿಕೊಂಡನು ಕೀಚಕ ತನ್ನ ಮನಸ್ಸಿನಲ್ಲಿ. ಅವಳ ಎಚ್ಚರಿಕೆಯ ಮಾತು ಆ ಖಳನ ಮನಸ್ಸಿಗೆ ಹೋಗಲಿಲ್ಲ."(*3)

ನನ್ನ ಪರಾಕ್ರಮವನ್ನು ನೀನರಿಯೆ. ನೀನು ನನಗೆ ಒಲಿದವಳಾದರೆ ಸಾಕು. ಈಶ್ವರನೇ ನನ್ನನು ಎದುರಿಸಿದರೂ ನಾನು ತೆರಳುವವನಲ್ಲ. ನಾನು ಹೆದರುತ್ತಿರುವುದು ಹುಳುಕನಾದ ದುಂಬಿಗೆ, ಗಳಹನಾದ ಕೋಗಿಲೆಗೆ, ಶಿಶಿವಸಂತರ ಬಲುಹಿಗೆ, ಲೋಕದ ಕೊಲೆಗಡಿಕನಾದ ಮನ್ಮಥನಿಗೆ. ಒಲಿಯದೆ ನೀನು ನನ್ನನ್ನು ಕೊಲ್ಲಬೇಡ ಎಂದು ಅಂಗಲಾಚಿಕೊಂಡನು. ಅದಕ್ಕೆ ದ್ರೌಪದಿ ನೀನೇನೋ ನನ್ನನ್ನು ಒಲಿದಿದ್ದೀಯೆ. ನಿನ್ನನ್ನು ಕೊಲ್ಲುವವಳು ನಾನಲ್ಲ.

ಆ ಸುಭಟರು ಬೇರೆ ಇದ್ದಾರೆ ಎಂದು ಎಥವಿಥವಾಗಿ ಹೇಳಿದರು ಕೀಚಕ ಕೇಳದೇ ದ್ರೌಪದಿಯನ್ನು ಕೆಣಕುತ್ತಾನೆ. ಆಗ ದ್ರೌಪದಿಯು ಸೂರ್ಯನನ್ನು ಮೊರೆಯಿಟ್ಟು ಬೇಡಿಕೊಂಡಾಗ ಸೂರ್ಯನು "ಅದೃಶ್ಯ ದೈತ್ಯನು ಕೀಚಕನನ್ನು ಹೊಡೆದು ಕೆಡವಲು. ಆ ದುರುಳನು ಜಿದ್ದೆದ್ದು ಒರಲುತ್ತ ತನ್ನ ಮನೆಗೆ ಓಡಿದನು. ಆಗ ದ್ರೌಪದಿ ಕೋಪದಿಂದ ನುಡಿಯಲು ಕೀಚಕ ನಿನ್ನ ಬೈಗುಳು ನನ್ನನು ನೋಯಿಸುವವೇ? ಎಂದು ಅವನು ಅವಳನ್ನು ನಿರ್ಭರಕಾಮದಿಂದ ತುಡುಕಿದನು. ದ್ರೌಪದಿ ಭಯದಿಂದ ನಡುಗಿ ಕೂಡಲೆ ಕೈಯನು ಹಿಂದಕ್ಕೆ ಸೆಳೆದುಕೊಂಡಳು. ಕೈಯ್ಯಲ್ಲಿದ್ದ ಮಧುಪಾತ್ರೆಯನ್ನು ನೆಲದ ಮೇಲೆ ಈಡಾಡಿ, ಮುಖ ತಿರುಗಿಸಿ, ರಭಸದಿಂದ ಹಾಯ್ದು ಸಭೆಗೆ ಓಡಿದಳು. ಕಾಮಕ, ಅವಳ ತುರುಬನ್ನು ಹಿಡಿದು, ಎಲೆ ತೊತ್ತಿನ ಮಗಳೆ, ಹಾಯ್ದು ಹೋದರೆ ನಾನು ಬಿಡುವೆನೆ ಎಂದು ಕಾಲಿನಿಂದ ಮೆಟ್ಟಿ ಹೊಯ್ದನು. ದ್ರೌಪದಿ ಕೆಳಕ್ಕೆ ಬಿದ್ದು ರಕ್ತವನ್ನು ಕಾರಿ, ಮುಡಿ ಧೂಳಿಯಲ್ಲಿ ಮುಸುಕಿ ಹೋಗಲು ನೆಲದ ಮೇಲೆ ಹೊರಳಿದಳು."*2

ದ್ರೌಪದಿಯನ್ನು ಸುತ್ತಲೂ ನೋಡುತ್ತಿರುವವರೆಲ್ಲಾ ಸುಮ್ಮನೇ ಕುಳಿತಿದ್ದರು. ಜೊತೆಗೆ ದ್ರೌಪದಿಯ ಪತಿಯಂದಿರೂ ಸಹ ಏನೂ ಮಾಡದೇ ಅಸಹಾಯಕರಾಗಿ ಕುಳಿತ್ತಿದ್ದರೂ, ಭೀಮನಿಗೆ ಮಾತ್ರ ಮನಸ್ಸಿನೊಳಗೆ ಕೀಚಕನ ಮೇಲೆ ಸೇಡುಕಾರುತ್ತಿತ್ತು. ಆದರೆ ಧರ್ಮರಾಯ ಸೈರಂಧ್ರಿಯನ್ನು ಸುಮ್ಮನೇ ನೀನು ಇಲ್ಲಿಂದ ಹೊರಟು ಹೋಗು ಎಂದಾಗ ದ್ರೌಪದಿಯು ಪ್ರಶ್ನೆಗಳನ್ನು ಕೇಳುತ್ತಾಳೆ.

1. ಇಲ್ಲಿರುವ ಯಾರೂ ನುಡಿಯಲಾಗದೆ?
2. ಖಳನು ಹೆಂಗಸನ್ನು ಬಡಿಯುತ್ತಿದ್ದರೆ ನೋಡುತ್ತಿರುವುದು ಸರಿಯೆ?
3. ಹಿರಿಯರಾದವರು ಮೌನ ಹಿಡಿಯಲು ಇದು ಹೊತ್ತೆ?
4. ನನ್ನ ನಿಟ್ಟುಸಿರು ನನ್ನ ಪತಿಗಳನ್ನು ತಾಕದೆ?

(*3 'ಕೀಚಕ ವಿಲಾಸ' ಎಂ.ವಿ ಸೀತಾರಾಮಯ್ಯ ಪು.ಸ.41)

5. ನಿರಪರಾಧಿಯಾದ ನನ್ನನ್ನು ಅವಗಡಿಸಿದ ಖಳನು ಕಾರ್ಯದ ಧರ್ಮಾಧರ್ಮವನ್ನು ಹೇಳುವವರು ಇಲ್ಲಿ ಯಾರೂ ಇಲ್ಲವೆ.

ಇಂತಹ ಪ್ರಶ್ನೆಗಳಿಗೆ ಉತ್ತರವಾಗಿ ಭೀಮನು ನಿಂತುಕೊಂಡನು. ಕೀಚಕನನ್ನು ನಾಶಮಾಡಲೇಬೇಕೆಂದು ನಿರ್ಧರಿಸಿದನು. ಕೊನೆಗೆ ದ್ರೌಪದಿಯ ದುಃಖದ ಪೌರುಷದ ಮಾತುಗಳು ಅವನನ್ನು ಕೆರಳಿಸುವುದು. ಈ ಕೋಪದಿಂದ ಕೀಚಕನನ್ನು ನಾಶಮಾಡಿ ದ್ರೌಪದಿಯನ್ನು ಮುಕ್ತಗೊಳಿಸುವನು.

ಇಷ್ಟೆಲ್ಲ ಕಷ್ಟಗಳನ್ನು ಅನುಭವಿಸಿ ದ್ರೌಪದಿ ಪಂಚಪತಿಯರೆದುರು ಪತಿವ್ರತೆಯಾಗಿ ಬದುಕಿದಳು. ಎಂಥ ಕಷ್ಟದಲ್ಲೂ ಸ್ತ್ರೀಯರು ಧೈರ್ಯಗೆಡಬಾರದು. ಪರಿಸ್ಥಿತಿಯನ್ನು ಎದುರಿಸಿ ಬಾಳಬೇಕು ಎಂಬ ಸಂದೇಶವಿತ್ತ ಆಕೆ ಪ್ರಾತಃ ಸ್ಮರಣೀಯಳೇ ಸರಿ.

**ದ್ರೌಪದಿಯ ಶ್ರೀಮುಡಿ**

ಕನ್ನಡ ಸಾಹಿತ್ಯರಂಗದಲ್ಲಿ ದ್ರೌಪದಿಯ ಶ್ರೀಮುಡಿಗೆ ಕೈಯಿಟ್ಟ ನಾಲ್ವರು ಸಮರ್ಥರಲ್ಲಿ ಇಬ್ಬರು ಮಹಾಕವಿಗಳು. ಪಂಪ, ಮತ್ತು ಕುಮಾರವ್ಯಾಸ

"ದ್ರೌಪದಿಯ ಮುಡಿ ಜಿಜ್ಜಿದ ಸಂದರ್ಭದಲ್ಲಿ ಪಂಪ ತನ್ನ 'ಹಿತಮಿತ ಮೃದುವಚನ'ತೆ ಅತಿ ಕಾರ್ಪಣ್ಯವಾಗುವಷ್ಟರ ಮಟ್ಟಿಗೆ ಸಂಕ್ಷಿಪ್ತವಾಗಿ ವರ್ಣಿಸಿಬಿಟ್ಟು ಮುಂದಿನ ರುದ್ರಭಯಂಕರ ಸನ್ನಿವೇಶಕ್ಕೆ ಧಾವಿಸಿದ್ದಾನೆ. ಪಂಪನಿಗೆ ಕೃಷ್ಣೆಯ ಕೃಷ್ಣಕಬರೀಭಾರ ನಾರಣಪ್ಪನಿಗೆ ತೋರುವಂತೆ 'ಶ್ರೀಮುಡಿ' ಆಗಿಲ್ಲ. ಅದಕ್ಕೆ ರಾಜಸೂಯಯಾಗದ ಸಮಯದಲ್ಲಿ ತೀರ್ಥಜಲಾಭಿಷೇಕ ಆಗಿಲ್ಲ. ಮುನಿವರ್ಯರ ಮಂತ್ರಘೋಷದಿಂದ ಪವಿತ್ರವೂ ಆಗಿಲ್ಲ. ದುಶ್ಯಾಸನನು ಅದನ್ನು ಹಿಡಿದಾಗ ಅದರಿಂದ ಮುಂದೆ ಒದಗುವ ಕೇಡನ್ನೇನೊ ಸೂಚಿಸುತ್ತಾನೆ. ಆ ಕೇಡು ಲೌಕಿಕ ಅಪರಾಧಕ್ಕೆ ಒದಗುವ ಶಿಕ್ಷೆಯ ರೂಪದ್ದೆ ಹೊರತು ಪಾಪರೂಪದ ಮಹಾಪಾತಕಕ್ಕೆ ಒದಗುವ ಉಗ್ರತಮ ಧರ್ಮದಂಡನೆ ಅಲ್ಲ. "ಕೃಷ್ಣೋರಗನಂ ಪಿಡಿದ ಬೆಳ್ಳಾಳಂ ಸುಮ್ಮನೆ ಬೆಮರುತ್ತುಮಿದು"(*4) ಎಂದು ಅವನ ಆಗಿನ ದುಶ್ಯಾಸನ ವರ್ಣನೆ.

ಗದುಗಿನ ಭಾರತದಲ್ಲಿ ಬರುವ ಸನ್ನಿವೇಶಗಳಲ್ಲಿಯಾಗಲಿ, ಪಾತ್ರಗಳಲ್ಲಿಯಾಗಲಿ, ವರ್ಣನೆಗಳಲ್ಲಿಯಾಗಲಿ ಪಂಪ ಭಾರತದ ನಯನಗಳನ್ನು ನಾವು ಕಾಣುವುದಿಲ್ಲ. ನಾರಾಣಪ್ಪನಿಗೆ ತನ್ನ ಕೃತಿ ಲೌಕಿಕ, ಆಗಮಿಕ. ವ್ಯಾವಹಾರಿಕ. ಪಾರಮಾರ್ಥಿಕ ಎಲ್ಲವನ್ನು ಒಳಗೊಂಡ ಅಖಂಡಕೃತಿ. ಕಾವ್ಯರಸಾಸ್ವಾದನೆ ಮಾತ್ರವಲ್ಲ ದೈವೋಪಾಸನೆಯೂ ಅಲ್ಲಿಯ ಅವಿಭಕ್ತ ಉದ್ದೇಶ.

(*4 ದ್ರೌಪದಿಯ ಶೀಮುಡಿ ಕುವೆಂಪು. ಪು. ಸ.6)

ಅವನು ದ್ರೌಪದಿಯ ಮುಡಿಯನ್ನು 'ಸಿರಿಮುಡಿ' ಎಂಬ ವಿಶೇಷಣದಿಂದ ಕರೆಯುವುದಕ್ಕೆ ಬದಲಾಗಿ 'ಶ್ರೀಮುಡಿ' ಎಂಬ ವಿಶೇಷಣವನ್ನೊಡ್ಡಿ ಧ್ವನಿಯಿಂದ ಅದನ್ನು ಪವಿತ್ರ ತರವನ್ನಾಗಿ ಮಾಡಿದ್ದಾನೆ. ದುಶ್ಯಾಸನ ಕೃತ್ಯ ಅಪರಾಧ ಮಾತ್ರವಲ್ಲ ಮಹಾಪಾತಕ ಎಂಬುದನ್ನು ಸೂಚಿಸುತ್ತಾನೆ.

"ನಾರಾಣಪ್ಪನ ಕಣ್ಣಿಗೆ ಅಥವಾ ಪ್ರಾತಿಕಾಮಿಯ ದೃಷ್ಟಿಗೆ 'ಚಕಿತ ಬಾಲ ಮೃಗಾಕ್ಷಿ' ದ್ರೌಪದಿ ಆ ಯುವತಿಯರ ಮಧ್ಯದಲ್ಲಿ ಹೇಗೆ ಕಾಣುತ್ತಾಳೆ? ಸಕಲ ಶಕ್ತಿ ಪರೀತ ವಿಮಳಾಂಬಿಕೆಯ ವೋಲ್ ! ವರಮಂತ್ರ ದೇವೀಪ್ರಕಾರ ಮಧ್ಯದಿ ಶೋಭಿಸುವ ಸಾವಿತ್ರಿಯಿಂದದಲಿ ! ಪ್ರಾತಿಕಾಮಿ ಆ ಪಾತಿವ್ರತೆಯರ ಶಿರೋಮಣಿಯ ಹತ್ತಿರೈತರಲಂಜಿದನು. ತನ್ನುತ್ತಮಾಂಗಕ್ಕೆ ಕರಯುಗವ ಚಾಚುತ್ತ ಪಾಂಚಾಲನಂದನೆಗೆ ಬಿನ್ನಹ ಮಾಡುತ್ತಾನೆ. ದ್ರೌಪದಿಯ ರಾಜೀಭಾವಕ್ಕೆ, ಪವಿತ್ರತೆಗೆ, ಆಕೆಯ ವ್ಯಕ್ತಿತ್ವದ ಶ್ರೀಗೆ ಪ್ರಾತಿಕಾಮಿ ಕೈ ಮುಗಿದು ಗೌರವ ತೋರುತ್ತಾನೆ."

ಪ್ರಾತಿಕಾಮಿ ನಡೆದ ಸಂಗತಿಯನ್ನು ವಿವರಿಸುತ್ತಾನೆ. ಯುಧಿಷ್ಠರನು ಮೊದಲು ತನ್ನನ್ನು ಸೋತ ಬಳಿಕ ದ್ರೌಪದಿಯನ್ನು ಸೋತನೆಂದು ಆ ಅವಿವೇಕದ ಆಡಳಿತದಲ್ಲಿ ತರ್ಕ ತನ್ನನ್ನು ರಕ್ಷಿಸುತ್ತದೆಂದು ಭ್ರಮಿಸುತ್ತಾಳೆ ದ್ರೌಪದಿ.

ಯುಧಿಷ್ಠರನು ಮೊದಲು ತನ್ನನ್ನು ಸೋತು ಆಮೇಲೆ ದ್ರೌಪದಿಯನ್ನು ಸೋತುದರಲ್ಲಿ ದೈವದ ರಕ್ಷಾಹಸ್ತವಿದೆಯೆಂದು ಆಸೆಬುರುಕಿಯಾಗುತ್ತಾಳೆ.

ದುಶ್ಯಾಸನನು ನೆಟ್ಟಗೆ ದ್ರೌಪದಿಯ ಇದಿರಿಗೆ ಹೋಗಿ ನಿಂದು ಅತ್ಯಂತ ಗ್ರಾಮ್ಯವಾಗಿ ಗದರುತ್ತಾನೆ. ಎಲೆಗೆ, ಗುರುವತನವಿದು ಒಂದೆ ಸಲುವುದು. ಸಲ್ಲದಿರು ಕುರುರಾಜ ಭವನದಲ್ಲಿ ಇಂದು ಮೆರೆವರೆ, ನಮ್ಮ ತೊತ್ತಿರ ಮುಂದೆ ಮೆರೆ, ನಡೆ, ಮಂಚದಿಂದಿಳಿ. ಅದಕ್ಕೆ ಸತಿಯ "ನಿಕ್ಕರೆಯಿಂದ ಜನಪನನುಜನು ನೀನು, ಎನಗೆ ಮೈದುನನಲಾ ! ತಪ್ಪೇನು? ಯಮ ನಂದನನು ಸೋಲಲಿ; ತನ್ನ ಪ್ರಶ್ನೆಗೆ ಕೊಡಲಿ ಮಾರುಮಾತ. ಅನುಜ, ಕೇಳ್ಳೆ, ಪುಷ್ಪವತಿಯಾನ್. ಎನಗೆ ರಾಜಸಭಾ ಪ್ರವೇಶವು ಅನುಚಿತವಲೇ ಹೇಳು? ಎಂಬುದಕ್ಕೆ ಖಳರಾಯ ಕತಿಗೊಂಡು "ಎಲ್ಲಿಯದು ದುಷ್ಟತ್ರೆ? ಮಾರು ಮಾತೆಲ್ಲಿಯದು? ನೀ ಪುಷ್ಪವತಿಯಾಗು; ಅಲ್ಲಿ ಫಲವತಿಯಾಗು ನಡೆ ಕುರುರಾಜ ಭವನದಲಿ ಎಂದು" ಎಂದು ಕಿರಾತರೂ ನಾಚುವಂತೆ ನುಡಿದು ಭಾರತ ಸಂಗ್ರಾಮವಲ್ಮೀಕ ರೂಪಿಣಿಯಾದ ಕೃಷ್ಣೆಯ ಮುಡಿಯ ಕೃಷ್ಣೋರಗಕ್ಕೆ ಕೈ ತೊಡುಕುತ್ತಾನೆ.

ಆ ಮುಡಿ ಬರಿಯ ಕೂದಲುಂಡೆಯಲ್ಲ. ಆ ಕೂದಲು ಯಃಕಶ್ಚಿತ ಸ್ತ್ರೀಯೊಬ್ಬಳದ್ದಲ್ಲ. ಅದು ಸಿರಿಮುಡಿ ಮಾತ್ರವಲ್ಲ, ಶ್ರೀ ಮುಡಿಯೂ ಅಹುದು.

ಅದೇನು ಎಂಬುದನ್ನು ಪಂಪನ ಭೀಮನು ಆ ಮುಡಿಯನ್ನು ಕಟ್ಟುವಾಗ ಲೋಕ ಲೋಕಗಳಿಗೆ ರಸರೋಮಾಂಚನವಾಗುವಂತೆ ವರ್ಣಿಸಿ ಘೋಷಿಸಿದ್ದಾನೆ. ಯಾವುದರಲ್ಲಿ ಕುರು ರಾಜಾನ್ವಯವೆ ಅಡಂಗಿತ್ತೊ, ಯಾವುದು ಮಾಹಾಭಾರತಕ್ಕಾದಿಯಾಯ್ತಾ ಆ ಕೇಶಪಾಶ, ಬಗೆಯ ಪೇಳ, ಸಾಮಾನ್ಯವೆ !

"ಅದೇನು ಒಂದು ಮುಷ್ಟಿಕೂದಲೆ? ಅದು ಕೇಶಪಾಶ ಪ್ರಪಂಚಂ. ಇಂತಹ ಮುಡಿ ಬರಿ ಮುಡಿಯೆ? ಬರಿಯಂ ಸಿರಿಮುಡಿಯೆ? ಅದು ನಿಜವಾಗಿಯೂ ಶ್ರೀಮುಡಿ ! ಈ ಎಲ್ಲ ವಸ್ತು ರಸ ಧ್ವನಿಯನ್ನು ಸಹೃದಯನ ಹೃದಯದಲ್ಲಿ ಒಮ್ಮೆಗೆ ಆಸ್ಫೋಟಿಸುವ ಸಲುವಾಗಿಯೆ ಕವಿಪ್ರತಿಭೆ ತನ್ನ ಗೌಡೀ ರೀತಿಯ ವಿಚಿತ್ರ ಮಾರ್ಗದ ಈ ಮಹಾಶೈಲಿಯನ್ನು ಆಶ್ರಯಿಸಿದೆ."

ದುಶ್ಶಾಸನ ದ್ರೌಪದಿಯ ಮುಡಿವಿಡಿದು ಅವಳನ್ನು ಸಭೆಗೆ ಎಳೆತಂದ ಸಂದರ್ಭದಲ್ಲಿ ಅದನ್ನು ಕಂಡ ಸಭಾಸವರ ಸಂಕಟಪೂರ್ಣ ಕ್ರೋಧ ಈ ರೀತಿ ವ್ಯಕ್ತವಾಗುತ್ತದೆ. ದ್ರೌಪದಿಯ ಮುಡಿಯ ಅಸಾಮಾನ್ಯತೆಯನ್ನೂ, ಲೋಕೋತ್ತರತೆಯನ್ನು, ಅತಿಶಯತೆಯನ್ನೂ ಅಭಿವ್ಯಕ್ತಗೊಳಿಸಬೇಕಾದರೆ, ಅದು ಬರಿಯ ಸಾಮಾನ್ಯ ಸ್ತ್ರೀಯ ತುರುಬು ಮಾತ್ರವಲ್ಲ, ಪಾಂಡವರ ಪಟ್ಟದ ಮಹಿಳೆಯ ಶ್ರೀಮುಡಿ ಎಂಬ ಮಹಿಮೆಯನ್ನು ಪ್ರಕಟಿಸಬೇಕಾದರೆ ಇಂತಹ ವಿಶಿಷ್ಟ ಪದ ಸಂಘಟನೆಯಿಂದಲ್ಲದೆ ಅನ್ಯಥಾ ಸಾಧ್ಯವಿಲ್ಲ. ಕವಿ ಸ್ವಯಂವರಕ್ಕೆ ಸಿದ್ಧಳಾಗುತ್ತಿರುವ ತರುಣಿ ದ್ರೌಪದಿಯ ಮುಡಿಯನ್ನು ಕುರಿತು ಬಣ್ಣಿಸುತ್ತಿದ್ದರೆ ಅದಕ್ಕೆ ಉಚಿತವಾದ ಶೃಂಗಾರ ರಸದ್ಯೋತಕವಾದ ಸುಕುಮಾರ ಮಾರ್ಗವನ್ನೇ ಪ್ರಯೋಗಿಸಬೇಕಾಗುತ್ತಿತ್ತು.

ಅಂತೂ "ದ್ರೌಪದಿಯ ತುರುಬು ಶ್ರೀಮುಡಿಯಾಗಿ, ಮಹಾಭಾರತಕ್ಕೆ ಆದಿಯಾಗಿ, ಕೇಶಪಾಶ ಪ್ರಪಂಚವೆ ಆಗುತ್ತದೆ. ನುಡಿ ತರುಣಿ, ತನ್ನಾಣೆ! ಭೀತಿಯ ಬಿಡಿಸಿದೆನಲಾ! ರಾಯನಾಜ್ಞೆಯ ತಡಿಕೆವಲೆ ನುಗ್ಗಾಯ್ತು ಹೋಗಿನ್ನು: ಮುಡಿಯ ನೀ ಕಟ್ಟು, ಎಲಗೆ ಸತಿ, ಎಂದ ತನ್ನ ಕಾಂತನಿಗೆ ಪಾಂಚಾಲಿ 'ಮುಡಿಯ ಕಟ್ಟುವ ಕಾಲ ಈ ದುಶ್ಶಾಸನ ಶಿರವ ಕೆಡಹಿ, ಶಾಕಿನಿಯರಿಗೆ ರಕುತವ ಕುಡಿಸಿ ತಣಿಯಲು ಕರುಳು ದಂಡೆಯ ಮುಡಿವ ವ್ರತ ಎನಗಿಹುದು. ನೀ ಹೇಳದಕೆ ನಿರ್ವಾಹ ಎಂಬ ತನ್ನ ಹೂಣಿಕೆಯ ನಿಧಿಯನ್ನು ಭೀಮನಿಗೆ ಕೈಯೆಡೆಯಾಗಿ ನೀಡುತ್ತಾಳೆ."

ದುಶ್ಶಾಸನ ಸಂಹಾರಕ್ಕಾಗಿ ಭೀಮನು ಕಾಯುತ್ತಲೇ ಇರುವನು. ದುಶ್ಶಾಸನ ಸಾವು ಸಮೀಪಿಸಿದಾಗ ದ್ರೌಪದಿಯ ಪ್ರಶ್ನೆಗಳು ಭೀಮನಲ್ಲಿಗೆ ಕೇಳುವಳು.

1. ಖಳರೊಳಗಿದಾವನು? ದುಶ್ಶಾಸನನೆ, ದುರ್ಯೋಧನನೆ, ಶಕುನಿಯ ಇತರ ದುಷ್ಟರೆ ಎಂಬ ವಿಚಾರದಲ್ಲಿ ಸಂಶಯಗ್ರಸ್ತೆಯಾದ ದ್ರೌಪದಿಯ ಪುನಃ ಪ್ರಶ್ನೆ

2. 'ವೀರ ದುಶ್ಯಾಸನ ಕಣಾ' ಎಂಬುದು ಭೀಮನ ಉತ್ತರ ಅಂತಾದಡಾಯ್ತು ! ಎಂದು ಸಂತೃಪ್ತೆಯಾದ ಪಂಚವಲ್ಲಿಭೆ ಭರ್ತಾರನ ಬಳಿ ಸಾರಿ ನಸುನಗುತ್ತ ತನ್ನ ಚರಣದ ಚಾರುನೇವುರ ಉಲಿಯುವಂತೆ ಖಳನ ಮಸ್ತಕವನ್ನು ಒರೆಯುತ್ತಾಳೆ. 'ನುಡಿದ ಭಾಷೆಯ ಕಡೆತನುಕ ಪೂರೈಸಿ
3. ಮಾಡುವ ಕಡುಗಲಿಗಳಾರುಂಟುಜಗದೊಳು ನಿನ್ನ ಹೋಲುವರು' ಎಂದು ಗಂಡನನ್ನು ಮೆಚ್ಚುತ್ತಾಳೆ.

ಮುಂದೆ ಭೀಮ ದ್ರೌಪದಿಯರ ಅಮಾನುಷವಾದ ರಕ್ತ ಶೃಂಗಾರದ ವರ್ಣನೆ ಭಯಂಕರವಾಗಿ ಸಾಗುತ್ತದೆ. ಅಂತೂ ಬಿಚ್ಚಿದ ಮುಡಿಕಟ್ಟುತ್ತದೆ ಅದನ್ನು ಶ್ರೀಮುಡಿ ಎಂದು ಕರೆಯುವುದಕ್ಕೂ ಈಗ ಹೆದರಿಕೆಯಾಗುತ್ತದೆ.

ಪಂಪನ ಭೀಮನೂ ಬಿಚ್ಚಿದ ಮುಡಿಯನ್ನು ಶತ್ರುವಿನ ರಕ್ತತೈಲದಿಂದ ನಾದು, ಅವನ ಹಲ್ಲ ಹಣಿಗೆಯಿಂದ ಆ ಕೂದಲನ್ನು ಬಾಚಿ. ಆ ಒಸಗೆಗೆ 'ಕುರುಳ್ಗಳೆ ಪೂಸವಾಸಿಗಮಾಗ ಕೃಷ್ಣೆಯಂ ಮುಡಿಯನಿದಂ' ಅಲ್ಲದೆ ಆ ಕಟ್ಟಿದ ಶ್ರೀಮುಡಿಗೆ ಚೂಡಾಮಣಿಯಿಡುವಂತೆ. ಅದರ ಅಸಾಮಾನ್ಯತೆ, ಅತಿಶಯತೆ, ಶಕ್ತಿ ಪವಿತ್ರತೆ ಇವು ಮಿಡಿಯುವಂತೆ, ಮಹಾಸ್ರಗ್ದರೆಯ ಮಹಾರುದ್ರ ವೀಣೆಯ ಭವ್ಯಧ್ವನಿಯೊಂದನ್ನು ಮಾಂಟಿದ್ದಾನೆ. ಇದನ್ನು ಆಲಿಸಿದ ಯಾರೇ ಆಗಲಿ ದ್ರೌಪದಿಯ ಶ್ರೀಮುಡಿಯನ್ನು ಬರಿಯ ತುರುಬು ಎಂದು ಹೇಳಲು ಸಾಧ್ಯವೇ? ಅದನ್ನು ಬಣ್ಣಿಸುವ ರೀತಿಯನ್ನು ಕುರಿತು 'ಮೊಳದುದ್ದದ ಮೂಗುತಿ' ಎಂದು ಕವಿವಾಣಿಯನ್ನು ಮೊದಲಿಸಲು ಸಾಧ್ಯವೆ.

**ಪಾಂಚಾಲಿ ಪ್ರಾತಃ ಸ್ಮರಣೀಯಗಳು:**

"ಪಾಂಚಾಲಿ" ಎಂಬ ಹೆಸರುಗಳಿಗೆ ಬೇರೆಯೇ ಹೆಸರು ಇದೆ. ಆಕೆ ದ್ರುಪದನ ಮಗಳಾದುದರಿಂದ ದ್ರೌಪದಿ. ಕಪ್ಪು ಹುಡಿಗಿಯಾದುದರಿಂದ ಕೃಷ್ಣೆ ಎಂಬ ಹೆಸರು ಆಕೆಗಿದೆ. ದ್ರುಪದನಿಗೆ ಯಜ್ಞಸೇನ ಎಂಬ ಹೆಸರಿರುವುದರಿಂದ ಈಕೆ ಯಜ್ಞಸೇನಿಯೂ ಹೌದು. ಇನ್ನೊಂದು ಹೆಸರು ನಿತ್ಯಯೌವನಾ ಎಂದು. ಕೆಲವರಿಗೆ ಎಷ್ಟು ವಯಸ್ಸಾದರೂ ಪ್ರಾಯ ಗೊತ್ತಾಗುವುದಿಲ್ಲ ಅಂತ ಹೇಳುತ್ತಾರಲ್ಲ ಆ ರೀತಿಯ ಶರೀರ ಪ್ರಕೃತಿ ಆಕೆಯದು. ಕಪ್ಪಾದರೂ ಸುಂದರಿ ಒಳ್ಳೆಯ ಗಟ್ಟಿ ಮುಟ್ಟಾದ ಶರೀರ. ಆ ಕಾಲದಲ್ಲಿ ಆಕೆಯನ್ನು ಮೀರಿಸುವ ಸುಂದರಿಯರೇ ಇರಲಿಲ್ಲವಂತೆ! ಹಾಗ ಆಕೆ ವಿಶ್ವಸುಂದರಿಯೂ ಹೌದು.

ಇಂಥವಳು ಪ್ರಾತಃ ಸ್ಮರಣೀಯಳು, ನಿತ್ಯ ಸ್ಮರಣೀಯಳು ಏಕೆ ಮತ್ತು ಹೇಗೆ ಎಂದು ತಿಳಿಯೋಣ.

ಬೆಳಗಾಗೆ ನಾನೆದ್ದು ಯಾರ್‍ಯಾರ ನೆನೆಯಲಿ

ಎಳ್ಳು ಜೀರಿಗೆಯ ಬೆಳೆಯೋಳ ಭೂತಾಯ

## ಎದ್ದೊಂದು ಗಳಿಗೇ ನೆನೆದೇನು

ಎಳ್ಳು ಜೀರಿಗೆ ಕೃಷಿ ಮಾಡಿ ಜೀವಿಸುವ ರೈತ ಕೇಳುತ್ತಾನೆ. ಬೆಳಗಾಗೆ ನಾನೆದ್ದು ಯಾರ್ಯಾರ ನೆನೆಯಲಿ ಎಂದು! ನೀನು ಯಾರನ್ನು ನೆನೆಯಬೇಡ ಎಳ್ಳು ಜೀರಿಗೆ ಬೆಳೆಯುವಂತಹ ಭೂತಾಯನ್ನೇ "ಎದ್ದೊಂದುಗಳಿಗೆ" ನೆನೆದು ಜಿಡು ಆ ಭೂತಾಯಿ ಅನುಗ್ರಹಿಸಿದರೆ ಮಾತ್ರ ನಿನ್ನ ಜೀವನ ಸುಗಮವಾದೀತಷ್ಟೆ ಎಂದು ಯಾರೂ ಹೇಳಿರಬೇಕು.

ಹಾಗೆಯೇ ಪ್ರಾತಃ ಸ್ಮರಣೀಯರು ನಮ್ಮ ಬದುಕಿಗೆ ಅತ್ಯುನ್ನತವಾದ ಸಂದೇಶ ನೀಡುವವರಾಗಿರಬೇಕು. ಅವರಲ್ಲಿ ಮಹೋನ್ನತ ಆದರ್ಶವಿರಬೇಕು. ಅವರು ಹೆಜ್ಜೆ ಹೆಜ್ಜೆಗೂ ನಮಗೆ ಮಾದರಿಯಾಗಿರಬೇಕು. ಬದುಕಿನ ಸಂದಿಗ್ದ ಪ್ರಸಂಗದಲ್ಲಿ ಅವರು ಮಾರ್ಗದರ್ಶಿಗಳಾಗಿರಬೇಕು. ಹಾಗಾದರೆ ಮಾತ್ರ ಅವರು ಪ್ರಾತಃಸ್ಮರಣೀಯರು.

ಅಹಲ್ಯಾ, ದ್ರೌಪದಿ, ಸೀತಾ, ತಾರ, ಮಂಡೋದರಿಚ ಪಂಚಕನ್ಯಾಃ ಸ್ಮರೇನ್ನಿತ್ಯರ ಮಹಾಪಾತಕಿನಾಶನಂ. ಇವರಲ್ಲಿ ನಾಲ್ವರೂ ರಾಮಾಯಣ ಕಾಲದವರು. ಅಹಲ್ಯೆ, ಸೀತೆ, ತಾರೆ, ಮಂಡೋದರಿ, ದ್ರೌಪದಿ ಒಬ್ಬಳೆ ಮಹಾಭಾರತ ಕಾಲದವಳು. ತ್ರೇತಾಯುಗದಲ್ಲಿ ನಾಲ್ಕು ಸ್ತ್ರೀರತ್ನಗಳಿದ್ದರೆ ದ್ವಾಪರಕ್ಕಾಗುವಾಗ ಒಬ್ಬಳೆ ಸಿಕ್ಕಿದಳಷ್ಟೆ. ಬಹುಶಃ ಈ ಐವರಲ್ಲಿ ದ್ರೌಪದಿಯಷ್ಟು ಕಷ್ಟಪಟ್ಟವಳು, ಅವಮಾನ ಹೊಂದಿದವಳು, ದುಃಖಿತಳು ಅಥವಾ ಶೋಷಿತಳು ಬೇರಾರು ಇಲ್ಲ.

ಒಂದು ಯೋಜನ ಅಂದರೆ ಸುಮಾರು ಮೂರು ಮೈಲು. ದ್ರೌಪದಿಯ ಶರೀರದ ಪರಿಮಳ ಯೋಜನದ್ದು, ದೂರದಿಂದಲೇ ಜನರಿಗೆ ಅನುಭವವಾಗುತ್ತಿತ್ತಂತೆ. ಪ್ರಕೃತಿ ಸಹಜವಾಗಿಯೇ ಮೂಡಿ ಬರುವ ಅದು ನೀಲ ನೈದಿಲೆಯಂತಹ ಪರಿಮಳ, ಆಕೆಯ ಮೈ ಬಣ್ಣ ಕೃಷ್ಣ ಅಂದರೆ ಕಪ್ಪಾದುದರಿಂದಲೇ ಆಕೆಗೆ ಕೃಷ್ಣೆ ಎಂದು ಹೆಸರು. ಕೃಷ್ಣ ದೇವರೂ ಕಪ್ಪು, ಈಕೆಯೂ ಕಪ್ಪು.

ದ್ರುಪದನ ಬದುಕಿನಲ್ಲಿ ಇದ್ದಂತ ಆಸೆ ಅವನಿಗೆ ಮಗಳುಬೇಕು, ಅದರಲ್ಲಿಯೂ ಅರ್ಜುನನ್ನು ತನ್ನ ಅಳಿಯನಾಗಬೇಕೆಂಬ ವರವನ್ನು ದೇವರಲ್ಲಿ ಪ್ರಾರ್ಥಿಸುತ್ತಾನೆ. ಅವನ ಬಯಕೆಯಂತೆ ದ್ರುಪದನಿಗೆ ಮಗಳು ಹುಟ್ಟುವಳು, ಬೆಳೆದು ದೊಡ್ಡವಳಾಗುತ್ತಾಳೆ. ಅವಳು ಮದುವೆ ಸಿದ್ದವಾಗುವಷ್ಟರಲ್ಲಿ ದ್ರುಪದನಿಗೆ ಮತ್ತೆ ಚಿಂತೆ ಪಾಂಡವರು. ಅರಗಿನ ಮನೆಯಲ್ಲಿ ಭಸ್ಮವಾದರೆಂಬ ಸುದ್ದಿ ಅವನಿಗೆಸುತ್ತದೆ. ಆತ ಗುರುಗಳನ್ನು ಕರೆಸಿ, ಇದೇಕೆ ಹೀಗಾಯ್ತು ಎಂದು ಕೇಳುತ್ತಾನೆ. ಆಗ ಗುರುಗಳು ಪಾಂಡವರು ಬದುಕಿದ್ದಾರೆ ಎಂದ ಧೈರ್ಯ ಹೇಳುತ್ತಾರೆ ಮತ್ತು ದ್ರೌಪದಿಗೆ ಸ್ವಯಂವರ ನಿಶ್ಚಯಿಸಿ, ರಾಜ್ಯ ಪರರಾಜ್ಯಗಳಲ್ಲಿ ಡಂಗುರ ಹೊಯ್ಸಿ ಎನ್ನುತ್ತಾರೆ.

ಪಾಂಡವರೆಲ್ಲಾ ಬ್ರಾಹ್ಮಣ ವೇಷವನ್ನು ಧರಿಸಿ ಸ್ವಯಂವರಕ್ಕೆ ಸೇರುತ್ತಾರೆ. ಆಗ ಬ್ರಾಹ್ಮಣರ ಮಧ್ಯದಿಂದ ಅರ್ಜುನನ ಉತ್ಥಾನ ಮತ್ಸ್ಯಯಂತ್ರ ಭೇದನ. ಪಣದಲ್ಲಿ ಜಯ. ದ್ರೌಪದಿ ಆತನಿಗೆ ಮಾಲೆ ಹಾಕುತ್ತಾಳೆ. ಸ್ವಯಂವರ ಮುಗಿಯಿತು. ಪಾಂಡವರು ದ್ರೌಪದಿ ಅನುಭವಿಸಿದ ಇನ್ನೊಂದು ಅತ್ಯಂತ ಅಪಮಾನದ ಮತ್ತು ಸಂಕಷ್ಟದ ಸಂದರ್ಭ ಅಜ್ಞಾತ ವಾಸದಲ್ಲಿ ನಡೆಯಿತು. ಪರವೂರಲ್ಲಿ ಗಂಡಸರು ಏನಾದರು ಉದ್ಯೋಗ ಮಾಡಿ ಅಜ್ಞಾತರಾಗಿ ಬದುಕಬಹುದು. ಆದರೆ ಒಬ್ಬಾಕೆ ಹೆಣ್ಣು ! ಪಾಪ ಆಕೆ ವಿರಾಟ ರಾಜನ ಹೆಂಡತಿ ಸುದೇಷ್ಣೆಯ ಅಂತಃಪುರದಲ್ಲಿ ಮಾಲಿನಿ ಅಂತ ಹೆಸರಿಟ್ಟುಕೊಂಡು, ಸೈರಂಧ್ರಿತನದ ವೃತ್ತಿ ಮಾಡಿಕೊಂಡು ಬದುಕುವುದಾಗಿ ನಿರ್ಣಯಿಸಿದಳು. ಪಾಂಡವರೂ ಅದಕ್ಕೆ ಒಪ್ಪಿದರು."(*6)

ಇನ್ನೊಬ್ಬರ ಮನೆಯಲ್ಲಿ ಅಂದರೆ ಇಲ್ಲಿ ಅರಮನೆಯಲ್ಲಿ ರಾಣಿವಾಸದಲ್ಲಿದ್ದುಕೊಂಡು ರಾಣಿಯ ಪರಿಚಾರಿಕೆಯಾಗಿ ಜೀವಿಸುವುದು. ಮುಖ್ಯವಾಗಿ ರಾಣಿಯರ, ರಾಜಕುಮಾರಿಯರ ಅಲಂಕಾರ ಕ್ರಿಯೆ ಮಾಡುವವಳು. ಅಂದರೆ ಇಲ್ಲಿ ಅರಮನೆಯಲ್ಲಿ ರಾಣಿವಾಸದಲ್ಲಿದ್ದುಕೊಂಡು ರಾಣಿಯ ಪರಿಚಾರಿಕೆಯಾಗಿ ಜೀವಿಸುವುದು. ಮುಖ್ಯವಾಗಿ ರಾಣಿಯರ, ರಾಜಕುಮಾರಿಯರ ಅಲಂಕಾರ ಕ್ರಿಯೆ ಮಾಡುವವಳು.
ಅಂದರೆ ಇವತ್ತಿನ ಸಂದರ್ಭದಲ್ಲಿ ಹೇಳುವುದಾದರೆ ಬ್ಯೂಟಿ ಪಾರ್ಲರ್‌ನ ಕೆಲಸ.ದ್ರೌಪದಿ ಕೇಶಾಲಂಕಾರದಲ್ಲಿ ಪ್ರವೀಣಳು. ಮುಖ ವರ್ಣಿಕೆಗಳ ಚಿತ್ರೀಕರಣದಲ್ಲಿ ಪ್ರವೀಣಳು. ಈ ಕೆಲಸ ಆಕೆಗೆ ಇಷ್ಟವೆಂದಲ್ಲ ಆದರೆ ಅನಿವಾರ್ಯವಾಗಿ ಮಾಡುತ್ತಾಳೆ ಅಷ್ಟೆ ಅಜ್ಞಾತವಾಸಕ್ಕೆ ಹೊರಡುವ ಮೊದಲು ಆಕೆ ಹೇಳುತ್ತಾಳೆ. ತಾನು ದ್ರೌಪದಿಯ ಕೇಶಾಲಂಕಾರ ಮಾಡುತ್ತಿದ್ದವಳು ಎಂದು ಹೇಳಿಕೊಂಡು ವಿರಾಟರಾಜನ ಪತ್ನಿಯ ಅಂತಃಪುರ ಸೇರುತ್ತೇನೆ ಎಂದಳು. ಹಾಗೆ ಸೇರಿದ ಆಕೆಗೆ ಮಾತ್ರ ಅಲ್ಲಿ ಇನ್ನೊಂದು ಅಪಾಯ ಕಾದಿತ್ತು. ಸುದೇಷ್ಣಾ ರಾಣಿಯ ತಮ್ಮ ಕೀಚಕ ಆಕೆಯನ್ನು ಮದುವೆಯಾಗಬೇಕೆಂಬ ಕನಸು ಕಾಣುತ್ತಾನೆ. ಅಕ್ಕ ಸುದೇಷ್ಣೆಯಲ್ಲಿ ಹೇಳುತ್ತಾನೆ. ಆಕೆ ಎಷ್ಟು ಬುದ್ಧಿವಾದ ಹೇಳಿದರೂ ಆತ ಕೇಳುವುದಿಲ್ಲ. ಕೊನೆಗೆ ತಮ್ಮನ ಒತ್ತಾಸೆಗೆ ಮಣಿದು ಆಕೆ ದ್ರೌಪದಿಯಲ್ಲಿ ಮದ್ಯಪಾತ್ರೆಯನ್ನು ಕೊಟ್ಟು ಕೀಚಕನಲ್ಲಿಗೆ ಒತ್ತಾಯದಲ್ಲಿ ಕಳುಹಿಸಿಯೇ ಬಿಡುತ್ತಾಳೆ. ಏನು ಮಾಡೋಣ ಉಪಾಯವಿಲ್ಲದೆ ಕೀಚಕನ ಬಳಿಗೆ ಮಧ್ಯರಾತ್ರಿ ಹಿಡಿದುಕೊಂಡು ಹೋಗುತ್ತಾಳೆ. ಆತ ಆಕೆಯ ಮನವೊಲಿಸಲು ಯತ್ನಿಸಿ ವಿಫಲನಾದಾಗ ಗಧರಿಸುತ್ತಾನೆ, ಹೆದರಿಸುತ್ತಾನೆ. ಎಡಗಾಲಿಂದ ತುಳಿಯುತ್ತಾನೆ ! ನೋಡಿ ಎಂಥ ಅವಮಾನ. ಒಬ್ಬಾಕೆ ಹೆಣ್ಣು ಇದರಿಂದ ಹೆಚ್ಚು ದುಃಖ ಪಡುವುದುಂಟೆ. ಅಪಮಾನಿತಳಾಗುವುದುಂಟೆ? ಆಕೆ ಈ ವೇದನೆಯನ್ನು ಭೀಮನಲ್ಲಿ ಹೇಳುತ್ತಾಳೆ. ಎದ್ದೇಳು ಭೀಮಸೇನ, ಸತ್ತವನ ಹಾಗೆ ಯಾಕೆ ಮಸ್ತಾಪಹರಣ ಮಾಡಿದ ಜಯದ್ರಿಥೆ ಜಟಾಸುರರು ನನ್ನೇನ್ನೇ ಅಪಹಾರ

(*6 ಪಾಂಚಾಲಿ ಪ್ರಾತಃ ಸ್ಮರಣೀಯಗಳು – ವೆಂಕಟರಾಜ ಪುಣಿಂಚತ್ತಾಯ, ಕ ಸಾ ಪ ಪು.ಸ.6)

ಮಾಡಿದರು. ಹನ್ನೆರಡು ವರ್ಷ ನಾನು ಕಾಡಲ್ಲಿ ಕಳೆದ ದಿನಗಳು ನಿತ್ಯ ಭೀತಿಯ ದಿನಗಳಾಗಿದ್ದವು. ಈಗ ಈ ಅರಮನೆಯಲ್ಲಾದರೂ ಸುಖವುಂಟೆ? ಇಂತಹ ಪ್ರಶ್ನೆಗಳಿಗೆ ಉತ್ತರವಾಗಿ ಭೀಮನು ನಿಲ್ಲುತ್ತಾನೆ. ಕೀಚಕನನ್ನು ಕೊಲ್ಲುತ್ತಾನೆ. ಇಂತಹ ಘಟನೆಗಳಿಂದ ದ್ರೌಪದಿ ಇಷ್ಟೆಲ್ಲ ಕಷ್ಟಗಳನ್ನು ಅನುಭವಿಸಿದ. ದ್ರೌಪದಿ ಪಂಚ ಪತಿಯರೆದುರು ಪತಿವ್ರತೆಯಾಗಿ ಬದುಕಿದಳು ಎಂಥ ಕಷ್ಟದಲ್ಲೂ ಸ್ತ್ರೀಯರು ಧೈರ್ಯಗೆಡಬಾರದು ಪರಿಸ್ಥಿತಿಯನ್ನು ಎದುರಿಸಿ ಬಾಳಬೇಕು ಎಂಬ ಸಂದೇಶವಿತ್ತ ಆಕೆ ಪ್ರಾತಃಸ್ಮರಣೀಯಳೇ ಸರಿ.

ನಮಗೆ ದ್ರೌಪದಿ ಐದು ಜನರು ಹೆಂಡತಿ ಎಂದು ತಮಾಷೆ ಮಾಡುವುದಕ್ಕಷ್ಟೇ ಗೊತ್ತಲ್ಲದೆ ಆಕೆ ಬದುಕಿನಲ್ಲಿ ಅನುಭವಿಸಿದ ಈ ಕಷ್ಟ ಪರಂಪರೆಗಳೆಲ್ಲ ಗೊತ್ತಿಲ್ಲ. ಒಬ್ಬಾಕೆ ಹೆಣ್ಣಿನ ಪೂರ್ತಿ ಸತ್ವ ಪರೀಕ್ಷೆ ಇಲ್ಲಿ ನಡೆದಿರುತ್ತದೆ. ಎಲ್ಲವನ್ನು ಆಕೆ ಸಹಿಸಿ ಬದುಕಿದವಳು ಮತ್ತೆ ಮಹಾಭಾರತ ಯುದ್ಧ ಮುಗಿದು ದಾಯದಿಗಳೆಲ್ಲ ಸತ್ತರು, ಸೋತರು. ಅಷ್ಟರಲ್ಲಿ ಅಶ್ವತ್ಥಾಮ ಬರುತ್ತಾನೆ ದ್ರೌಪದಿಯ ಮಕ್ಕಳಾದ ಉಪ ಪಾಂಡವರನ್ನು ಕೊಲ್ಲುತ್ತಾನೆ. ಶಿಶು ಹತ್ಯೆ ಮಾಡುತ್ತಾನೆ. ದ್ರೌಪದಿ ಸಹಿಸಲಿಕ್ಕೆ ಇನ್ನೇನು ಉಳಿದಿದೆ. ಆಕೆಯ ವಸ್ತ್ರಾಪಹರಣ ಮಾಡಲಾಯಿತು. ಎರಡೆರಡು ಸಲ ಕನ್ಯಾಪಹರಣ ಮಾಡಲಾಯಿತು. ಪರಗೃಹದಲ್ಲಿ ಸಾರ್ವಜನಿಕರೆದುರು ತುಳಿಯಲಾಯಿತು.

## ಮಹಾಭಾರತದಲ್ಲಿ ಮಹಿಳಾ ಪಾತ್ರಗಳು

ದ್ರೌಪದಿ ಎಂದ ಕೂಡಲೇ ನಮ್ಮ ಮುಂದೆ ನಿಲ್ಲುವುದು ಅತೀ ತೇಜಸ್ವಿನಿಯಾದ ಪ್ರೌಢೆಯ ಚಿತ್ರ. ಮಹಾಕವಿಗಳ ಲೇಖನಿಯ ಮೂಲಕ ಅವಳು ಭಾರತೀಯರಿಗೆಲ್ಲ ಚಿರ ಪರಿಚಿತಳು. ಸೌಂದರ್ಯ, ತೇಜಸ್ಸುಗಳೆರಡನ್ನೂ ಒಂದಡೆಯೇ ಎರಕ ಹುಯ್ಯದಂತಿದ್ದ ಆ ಮಹಿಳೆಯ ನಗೆ, ನಲಿವು, ದರ್ಪ, ಬಿರುನುಡಿ, ನೋವು, ಸಂಕಟ ಪ್ರತಿಯೊಂದನ್ನು ನಾವು ಅರ್ಥಮಾಡಿಕೊಳ್ಳಬಲ್ಲೆವು. ಅಗ್ನಿಪುತ್ರಿಯಾದ ಅವಳು ತೇಜಸ್ವಿನಿಯಾದದ್ದರಲ್ಲಿ ಆಶ್ಚರ್ಯವೇನು? ಮಹಾ ಕವಿಯ ನುಡಿಗಳಲ್ಲೇ ಹೇಳುವುದಾದರೆ ರಣಚಂಡಿಯು ಆ ಬೆಂಕಿಯ ಮಗಳು.

ಮಹಾಭಾರತದ ಇನ್ನೊಂದು ಅತಿ ಮುಖ್ಯ ಪಾತ್ರವಾದ ಶ್ರೀಕೃಷ್ಣನಂತೆಯೇ ದ್ರೌಪದಿ ಮಹಾಭಾರತದ ಸೂತ್ರಧಾರಿ ಎಂದರೆ ತಪ್ಪಲ್ಲ. ಹಿರಿಯರೊಬ್ಬರು ಹೇಳಿದಂತೆ ಸೀತೆ, ರಾವಣನ ವಧೆಗೆ ನೆಪಮಾತ್ರ. ಒಂದು ವೇಳೆ ಸೀತಾಪಹರಣ ಆಗದಿದ್ದರೂ ಬೇರೆ ಯಾವುದೋ ಕಾರಣದಿಂದ ಅಥವಾ ಋಷಿ ಮುನಿಗಳಿಗೆ ಅವನಿಂದ ತೊಂದರೆ ಎನ್ನುವ ಕಾರಣದಿಂದ, ವಾಲಿಯನ್ನು ಕೊಂದಂತೆಯೇ ಶ್ರೀ ರಾಮನು ರಾವಣನನ್ನು ಕೊಲ್ಲುವ ಸಾಧ್ಯತೆಯಿತ್ತು. ಆದರೆ ದ್ರೌಪದಿಯಿಲ್ಲದೆ ಮಹಾಭಾರತ ಯುದ್ಧ ನಡೆಯುತ್ತಲೇ ಇರಲಿಲ್ಲ ಎನ್ನಬಹುದು. ಅವಳೇ ಪದೇ ಪದೇ ಹೇಳುತ್ತಿದ್ದಂತೆ ಧರ್ಮರಾಜ ಧರ್ಮದ ಗರ ಹೊಡೆದವನನ್ನು

ಭೀಮನಂತಹ ರಾಜಸ ಪ್ರವೃತ್ತಿಯವನಿಗೂ ಅಣ್ಣನ ಮಾತನ್ನು ಮೀರಿ ದಾಯದಿಗಳೊಡನೆ ಸೆಣಸುವ ಮನಸ್ಸಿಲ್ಲ. ಅರ್ಜುನ, ನಕುಲ, ಸಹದೇವರಂತೂ ಸರಿಯೇ ಸರಿ. ಇಂತಹ ಪತಿಗಳಿಗೆ ಮತ್ತೆ ಮತ್ತೆ ತನ್ನ ಪರಾಭವವನ್ನು ಜ್ಞಾಪಿಸಿ ಪ್ರಭೋದಿಸದಿದ್ದರೆ ಬಹುಶಃ ಭಾರತದ ಯುದ್ಧ ನಡೆಯದೇ ಇರುವ ಸಂದರ್ಭವೂ ಬರುತ್ತಿತ್ತೇನೋ ! ಆದ್ದರಿಂದಲೇ ಧೈರ್ಯವಾಗಿ ಹೇಳಬಹುದು ಮಹಾಭಾರತದ ಯುದ್ಧ ರಥದ ನಿಜವಾದ ಚಾಲಕಿ ದ್ರೌಪದಿಯೇ.

ದ್ರೌಪದಿಯ ಈ ಛಲದ ಮೂಲ ಅವಳ ಹುಟ್ಟಿನಲ್ಲೇ ಅಡಗಿದೆ ಎಂದರೂ ತಪ್ಪಾಗದು. ತಮಗೆ ಹಿಂದೆ ಅಪಮಾನಪಡಿಸಿದನೆಂದು ದ್ರೋಣಾಚಾರ್ಯರು ಪಾಂಚಾಲ ರಾಜನಾದ ದ್ರುಪದನನ್ನು ತನ್ನ ಶಿಷ್ಯರಿಂದ ಹಿಡಿದು ತರಿಸಿ ಭಂಗಪಡಿಸಿದರು. ಇದರಿಂದ ನೊಂದ ದ್ರುಪದರಾಜ ಯುದ್ಧದಲ್ಲಿ ಹೆಚ್ಚಿನ ಪರಾಕ್ರಮ ತೋರಿದ ಅರ್ಜುನನಿಗೆ ವಧುವಾಗುವ ಹೆಣ್ಣುಮಗಳನ್ನು, ದ್ರೋಣಾಚಾರ್ಯರನ್ನು ಕೊಲ್ಲುವ ಯೋಗ್ಯತೆಯುಳ್ಳ ಮಗನನ್ನು ಕೋರಿ ಯಾಗ ಮಾಡಿದ. ಆ ಯಾಗದ ಫಲವಾಗಿ ಜನಿಸಿದವರು ದ್ರೌಪದಿ ಮತ್ತು ದೃಷ್ಟದ್ಯುಮ್ನ. ಹೀಗೆ ತಂದೆಯ ಯಾವುದೋ ಸ್ಪರ್ಧೆಯ ಮನೋಭಾವದ ಫಲವಾಗಿ ಜನಿಸಿದವರು ಯಾಜ್ಞಸೇನಿ ಎನಿಸಿದ ದ್ರೌಪದಿ.

ಮುಂದೆ ರಾಜಕುಮಾರಿ ಬೆಳೆದಳು ಸೌಂದರ್ಯದಲ್ಲಿ, ವಿದ್ಯೆಯಲ್ಲಿ, ಚತುರತೆಯಲ್ಲಿ ಎಣೆಯಿಲ್ಲದವಳೆನಿಸಿದಳು. ಇಷ್ಟರಲ್ಲಿ ದಾಯಾದಿಗಳಿಂದ ಕಷ್ಟ ಕೋಟಲೆಗಳನ್ನು ಅನುಭವಿಸಿ ಅರಗಿನ ಮನೆಯ ವಿಪತ್ತಿನಿಂದ ಪಾರಾಗಿ ವೇಷ ಮರಸಿಕೊಂಡು ಪಾಂಡವರು ಊರೂರು ಅಲೆಯುತ್ತಿದ್ದರು. ಅವರು ಅರಗಿನ ಮನೆಯ ಉರಿಯಲ್ಲಿ ಸಿಕ್ಕಿ ಬೆಂದುಹೋದರೆಂದೇ ದ್ರುಪದರಾಜನಿಗೆ ಇದರಿಂದ ಬಾರೀ ಪೆಟ್ಟು ಬಿದ್ದಂತಾಗಿತ್ತು. ಅಂದ ಮಾತ್ರಕ್ಕೆ ಅವನು ಪಾಂಡವರ ಮರಣವನ್ನು ನಂಬಿದನೆಂದೇನೂ ಅಲ್ಲ. ಪಾಂಡವರನ್ನು ಹುಡುಕಿಸಲು ಬೇಕಾದಷ್ಟು ಪ್ರಯತ್ನವನ್ನೂ ಮಾಡಿದ. ಪ್ರಯತ್ನ ಫಲಕಾರಿಯಾಗದಿರಲು ಅರ್ಜುನನಂತಹ ಧನುರ್ವಿದ್ಯಾ ಪಂಡಿತನಿಂದ ಮಾತ್ರ ಸಾಧ್ಯವಾಗಬಲ್ಲ ಮತ್ಸ್ಯಯಂತ್ರವನ್ನು ಪಣವಾಗಿಟ್ಟು ದ್ರೌಪದಿಯ ಸ್ವಯಂವರವನ್ನೇರ್ಪಡಿಸಿದ ಅವನ ನಿರೀಕ್ಷೆ ಸುಳ್ಳಾಗಲಿಲ್ಲ. ಬ್ರಾಹ್ಮಣ ವೇಷದಲ್ಲಿದ್ದ ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಗೆದ್ದ. ಈ ಸಂದರ್ಭದಲ್ಲಿ ವಧುವಾದ ದ್ರೌಪದಿಯ ಮನಸ್ಸಿನಲ್ಲಿ ಯಾವ ಕಾವ್ಯದಲ್ಲೂ ಕಾಣಲಾರವು. ಅರ್ಜುನನಿಗೆ ಮೀಸಲಾಗಿದ್ದ ತಾನು ಒಬ್ಬ ಅನಾಮಧೇಯ ಬ್ರಾಹ್ಮಣನಿಗೆ ಮಾಲೆಹಾಕಬೇಕೆಂದು ಅಸಮಾಧಾನವಾಯಿತೋ, ಮಹಾಯಂತ್ರವನ್ನು ಭೇದಿಸಿದವನು ಸಾಧಾರಣ ಮನುಷ್ಯನಾಗಿರಲಾರ ಎಂಬ ನಂಬಿಕೆಯಿಂದಲೋ, ವೀರಪಣವಾದ ತನಗೆ ನಿರ್ಧರಿಸುವ ಅಧಿಕಾರವಿಲ್ಲವೆಂದು ಔದಾಸೀನ್ಯದಿಂದಲೋ ಅಥವಾ ಎದುರಿಗಿದ್ದ ಯುವಕನ ಸುಂದರ ಭದ್ರಾಕಾರವನ್ನು ಕಂಡು

ಆಕರ್ಷಿತಳಾಗಿಯೋ ಅಂತೂ ದ್ರೌಪದಿ ಕೊಂಡವೂ ಅಳುಕದೆ ಹೂಮಾಲೆಯನ್ನು ಅರ್ಜುನನ ಕೊರಳಿಗೆ ಹಾಕಿ ಅವನ ಹಿಂದೆ ಹೊರಟೇ ಹೋಗುತ್ತಾಳೆ. ಇಲ್ಲಿಯವರೆಗೆ ಎಲ್ಲ ಸರಿಯಾಯಿತು. ಮೊದಲೇ ನಿರ್ಧರಿಸಿದ್ದಂತೆ ಅವಳು ಅರ್ಜುನನ ಕೈಹಿಡಿದಿದ್ದರೆ ಮುಂದೆ ಏನಾಗುತ್ತಿತ್ತೋ ಊಹಿಸುವುದು ಕಷ್ಟ. ಒಂದಂತೂ ನಿಶ್ಚಯ. ಪಗಡೆಯ ಜೂಜಿನಲ್ಲಿ ತಮ್ಮನ ಹೆಂಡತಿಯನ್ನು ಪಣವಾಗಿಡುವ ಅಧಿಕಾರ ಧರ್ಮರಾಯನಿಗೆ ಖಂಡಿತ ಬರುತ್ತಿರಲಿಲ್ಲ. ಅದರ ಫಲವಾಗಿ ದ್ರೌಪದಿ ಅಪಮಾನಿತಳಾಗುವ ಹಾಗೂ ಅದಕ್ಕಾಗಿ ಭೀಮ ದುಶ್ಶಾಸನ, ದುರ್ಯೋಧನರನ್ನು ನಾಶಮಾಡುವ ಪ್ರತಿಜ್ಞೆ ಮಾಡಬೇಕಾದ ಪ್ರಮೇಯವೂ ಬರುತ್ತಿರಲಿಲ್ಲ. ಆದರೆ ಇದೆಲ್ಲಾ ಊಹೆಯ ಪ್ರಪಂಚ. ಪಂಪ ದ್ರೌಪದಿಯನ್ನು ಅರ್ಜುನನೊಬ್ಬನಿಗೆ ಪತ್ನಿಯನ್ನಾಗಿ ಮಾಡಹೋಗಿ ಅಭಾಸಕರವಾದ ಸಂಧರ್ಭಗಳನ್ನು ತಂದುಕೊಂಡಿದ್ದಾನೆ. ವಾಸ್ತವವಾಗಿ ನಡೆದದ್ದೇ ಬೇರೆ.

ಅರ್ಜುನ, ಭೀಮರು ದ್ರೌಪದೀ ಸಮೇತರಾಗಿ ಪಾಂಚಾಲ ನಗರದಲ್ಲಿ ತಾವು ಇಳಿದುಕೊಂಡಿದ್ದ ಬಿಡಾರಕ್ಕೆ ಬಂದು ವಿನೋದವಾಗಿ "ಅಮ್ಮಾ ಭಿಕ್ಷೆ ತಂದಿದ್ದೇವೆ ಎಂದರು. ಒಳಗಡೆ ಇದ್ದ ತಾಯಿ ಕುಂತಿ ಎಂದಿನಂತೆ ಭಿಕ್ಷಾನ್ನ ತಂದಿರಬಹುದೆಂದು ಭಾವಿಸಿ ಐದು ಜನರೂ ಹಂಚಿಕೊಳ್ಳಿ"(*7) ಎಂದಳು. ತಾಯಿಯ ಮಾತನ್ನು ಮೀರಲೊಪ್ಪದ ಐದೂ ಜನರು ದ್ರೌಪದಿಯನ್ನು ಮದುವೆಯಾಗಲು ನಿರ್ಧರಿಸಿದರು. ಇದನ್ನು ದ್ರುಪದರಾಜ ವಿರೋಧಿಸಲು ಹಿರಿಯರು ದ್ರೌಪದಿಯ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿ ಅವನನ್ನು ಒಪ್ಪಿಸಿದರು. ದ್ರೌಪದಿ ಪಾಂಡವರೈವರಿಗೂ ಪತ್ನಿಯಾದಳು.

ಇಲ್ಲಿ ಯೋಚಿಸಬೇಕಾದ ಅನೇಕ ಅಂಶಗಳಿವೆ. ಮಕ್ಕಳು ತಂದಿದ್ದು ಭಿಕ್ಷೆಯ ಕನ್ಯೆಯನ್ನು ಎಂದು ತಿಳಿದ ಮೇಲೂ ನನ್ನ ಮಾತನ್ನು ಸುಳ್ಳಾಗಿಸಬೇಡಿ ಎಂದು ಮಕ್ಕಳನ್ನು ಒತ್ತಾಯಪಡಿಸುವಷ್ಟು ಕುಂತಿ ಮೂರ್ಖಳೆ ! ಒಂದು ವೇಳೆ ಅವಳು ಹಾಗೆ ಹೇಳಿದಳೆಂದು ನಂಬಿದರೂ ಪೂರ್ವಜನ್ಮದ ಕಥೆಯ ಆಧಾರದ ಮೇಲೆ ದ್ರುಪದನಂತಹ ಪ್ರಾಜ್ಞನಾದ ರಾಜನೂ ಆಸ್ಥಾನಿಕರೂ ಇದನ್ನು ಒಪ್ಪುತ್ತಿದ್ದರೇ? ಇವರೆಲ್ಲ ಒಪ್ಪಿದರೆಂದು ಭಾವಿಸಿದರೂ ಜನಾಪವಾದ ತಗಲುವ ಭೀತಿ ಇದ್ದಿದ್ದರೆ ದ್ರೌಪದಿ ಇದಕ್ಕೆ ಸಮ್ಮತಿಸುತ್ತಿದ್ದಳೇ? ಈ ಸಂಧರ್ಭದಲ್ಲಿ ಇಂತಹ ಅನೇಕ ಪ್ರಶ್ನೆಗಳು ಬುದ್ಧಿಯನ್ನು ಕೆಣಕುತ್ತವೆ. ನಿಧಾನವಾಗಿ ಆಲೋಚಿಸಿದಾಗ ಇದಕ್ಕೆ ತೋರುವ ಕಾರಣ ಇಷ್ಟು. ಇಂದು ಅಸಾಧ್ಯ ಎನಿಸುವ ಅನೇಕ ಉದಾರ ಸಂಪ್ರದಾಯಗಳು ಅಕಾಲದಲ್ಲಿದ್ದವು. ವಿಚಿತ್ರ ವೀರ್ಯನ ಮರಣಾನಂತರ ಅವನ ಪತ್ನಿಯರಾದ ಅಂಬಿಕೆ, ಅಂಬಾಲಿಕೆಯರು ವ್ಯಾಸರಿಂದ ಮಕ್ಕಳನ್ನು ಪಡೆದರೂ ಆ ಮಕ್ಕಳು ಕುರುವಂಶದವರೆಂದೇ ಅನ್ನಿಸಿಕೊಂಡರು. ಶಾಪಗ್ರಸ್ತನಾದ ಪಾಂಡುವಿನ ಕೈಹಿಡಿದ ಕುಂತಿ, ಮಾದ್ರಿಯರಂತೂ ದೇವತೆಗಳಿಂದಲೇ ಸಂತಾನವನ್ನು ಕಾಣಬೇಕಾಯಿತು. ಪರಾಶರ

ಮಹರ್ಷಿಗಳಿಂದ ಒಬ್ಬ ಪುತ್ರನನ್ನು ಪಡೆದ ನಂತರವೂ ಸತ್ಯವತಿ ಕನ್ಯೆಯೆನಿಸಿ ಮಹಾರಾಜನ ಕೈ ಹಿಡಿಯುವ ಅರ್ಹತೆ ಪಡೆದಳು. ಇದೇ ರೀತಿ ಒಬ್ಬ ಹೆಂಗಸು ಅನೇಕ ಜನ ಪತಿಯರನ್ನು ಪಡೆಯುವುದು ಹೆಚ್ಚು ರೂಢಿಯಲ್ಲಿಲ್ಲದಿದ್ದರೂ, ಅಧರ್ಮ ಎನ್ನುವ ಭಾವನೆ ಆ ಕಾಲದಲ್ಲಿ ಪ್ರಬಲವಾಗಿ ಇರಲಿಲ್ಲವೆಂದೇ ತೋರುತ್ತದೆ.

ಸಾಮಾನ್ಯವಾಗಿ ಎಲ್ಲ ಕವಿಗಳೂ, ಜನಸಾಮಾನ್ಯರೂ ಹೆಂಗಸನು ಹೊಟ್ಟೆ ಕಿಚ್ಚಿನ ಮೊಟ್ಟೆ ಎಂದೇ ಭಾವಿಸಿರುತ್ತಾರಾದರೂ ನಿಜವಾದರೂ, ಹಲವಾರು ಸಂದರ್ಭಗಳಲ್ಲಿ ಹೆಂಗಸಿನ ಅಸೂಯೆ ಹೆಡೆಯೆತ್ತಿ, ಸುತ್ತಲಿನವರ ಮೇಲೆ ವಿಷ ಕಾರುವುದನ್ನು ನಾವು ಕಾಣುತ್ತೇವಾದರೂ, ಗಂಡು ಹೆಣ್ಣಿನ ಸಂಬಂಧದ ವಿಷಯ ಬಂದಾಗ ಮಾತ್ರ ಗಂಡಿನ ಅಸೂಯೆ ಹೆಣ್ಣಿನ ಅಸೂಯೆಗಿಂತ ಒಂದು ಕೈ ಮೇಲೆ. ಅನಿವಾರ್ಯ ಸಂದರ್ಭದಲ್ಲಾದರೂ ಹೆಂಗಸು ತನ್ನ ಪತಿಯನ್ನು ಅಥವಾ ಪ್ರೇಮಿಯನ್ನು ಬೇರೊಬ್ಬ ಹೆಂಗಸಿನೊಂದಿಗೆ ಹಂಚಿಕೊಳ್ಳಬಲ್ಲಳು. ಆದರೆ ಪುರುಷನಿಂದ ಇದು ಸರ್ವಥಾ ಸಾಧ್ಯವಿಲ್ಲ. ಆದ್ದರಿಂದಲೇ ಬಹು ಪತಿತ್ವ ಪದ್ಧತಿ ಹಿಂದೆ ಕೆಲವು ಪ್ರದೇಶಗಳಲ್ಲಿ ಕೆಲವು ಪಂಗಡಗಳಲ್ಲಾದರೂ ಇದ್ದಿರಬಹುದಾದರೂ ಈಗ ಸಂಪೂರ್ಣವಾಗಿ ನಾಶವಾಗಿದೆಯೆಂದೇ ಹೇಳಬಹುದು.

ಪಾಂಡವರು ಮಹಾಪುರುಷರು. ಸಣ್ಣ ಭಾವನೆಗಳಿಗೆ ಮನಸ್ಸಿನಲ್ಲಿ ಎಡೆಗೊಡದವರು. ಪರಸ್ಪರ ಅತೀವ ವಿಶ್ವಾಸವುಳ್ಳವರು ಎಲ್ಲದಿಟ. ಆದರೂ ಪಂಚವಲ್ಲಭೆಯಾದ ದ್ರೌಪದಿ ಈ ಐವರು ಗಂಡಂದಿರೊಡನೆ ಸಂಸಾರ ಮಾಡುವಾಗ ತಂತಿಯ ಮೇಲೆ ಕಸರತ್ತು ಮಾಡಿದಂತೇ ನಡೆದಿರಬೇಕು. ತನ್ನ ಕಷ್ಟ ಸುಖ ಹೇಳಿಕೊಳ್ಳುವಾಗ ನನ್ನ ಮುಂದೆ ಯಾಕೆ ಹೇಳಿಕೊಳ್ತೀ, ನಿನ್ನ ಇನ್ನೊಬ್ಬ ಗಂಡನಲ್ಲಿ ಹೇಳು ಎಂದು ಅವರು ವ್ಯಂಗ್ಯವಾಡಿರಲೂಬಹುದು. ಇಂತಹ ಒಂದೇ ಒಂದು ಉದಾಹರಣೆ ನಮಗೆ ಸಿಗುತ್ತದೆ.

ದ್ರೌಪದಿಯ ಜೀವನದಲ್ಲಿ ಅನೇಕ ಘಟನೆಗಳು ನಡೆದಿದ್ದರೂ ಪಾಂಡವರು ವಿವೇಕಿಗಳೂ, ಧರ್ಮನಿಷ್ಠರೂ ಆಗಿದ್ದುದರಿಂದ ಮನೆಯೊಳಗಣ ಅಸಮಾಧಾನದ ಬೆಂಕಿ ಹೊರಗೆ ಕಾಣಿಸಿಕೊಳ್ಳದೆ ಒಳಗೇ ಅಡಗಿಹೋಯಿತು. ಜೊತೆಗೆ ಹಿರಿಯರ ಸಲಹೆಯಂತೆ ದ್ರೌಪದಿ ವರ್ಷಕ್ಕೊಬ್ಬ ಗಂಡನೊಡನೆ ಬಾಳುವಂತಾದುದರಿಂದ ಅವಳ ಅನೇಕ ಸಮಸ್ಯೆಗಳು ದೂರವಾದವು. ಮದುವೆಯಾದ ಐದು ಹತ್ತು ವರ್ಷ ದ್ರೌಪದಿ ನಿಶ್ಚಿಂತೆಯಾಗಿ ರಾಜಭೋಗಗಳನ್ನು ಅನುಭವಿಸುತ್ತಾ ಸುಖಿಸಿರಬಹುದು. ಮುಂದೆ ಧರ್ಮರಾಜನ ಜೂಜಿನಿಂದ ಪ್ರಾರಂಭವಾದ ಅವಳ ದುಃಖ ಪರಂಪರೆ ಕೊನೆಯವರೆಗೂ ಬಿಡಲೇ ಇಲ್ಲ. ಯುದ್ಧ ಮುಗಿದು ಕೌರವರೆಲ್ಲರೂ ಹತರಾದ ಮೇಲೂ ಹೆತ್ತ ಐದು ಜನ ಮಕ್ಕಳನ್ನು ಸೋದರ ಬಾಂಧವರನ್ನೂ ಕಳೆದುಕೊಂಡ ದ್ರೌಪದಿ ಚಿರದುಃಖಿನಿಯಾಗಿಯೇ ಉಳಿದಳು.

ದ್ರೌಪದಿಯಂತಹ ಛಲಗಾತಿ ಇನ್ನೊಬ್ಬಳಿಲ್ಲಾ ಎನ್ನುವ ಮಾತೂ ನಿಜವೇ ! ಶ್ರೀಕೃಷ್ಣ ಕೌರವರೊಂದಿಗೆ ಸಂಧಿಮಾಡಿಕೊಳ್ಳಲು ಹೊರಟಾಗ ಅವಳಾಡಿದ ಮಾತುಗಳೇ ಸಾಕ್ಷಿ. ತನ್ನ ಹರಿಬವನ್ನು ಕಂಡು ಮರುಗುತ್ತಿದ್ದ ಶ್ರೀಕೃಷ್ಣನೂ ಸಂಧಿ ಪ್ರಯತ್ನಕ್ಕೆ ತೊಡಗಿದ. ಭೀಮನೂ ಅಣ್ಣನ ಮಾತಿಗೆ ತಲೆದೂಗಿದ ಎಂದು ತಿಳಿದ ಕೂಡಲೇ ದ್ರೌಪದಿ ನುಡಿಯುತ್ತಾಳೆ. "ಎಷ್ಟಾದರೂ ನೀವು ಕೌರವ ವಂಶದವರು. ಅವರನ್ನು ಕಂಡರೆ ನಿಮಗೆ ಪ್ರೇಮ ಇರುವುದು ಸಹಜವೇ. ಪಾಂಚಾಲರಾದ ನಾವು ಬೇರೆಯವರು ಆಗಲಿ, ನೀವು ಯುದ್ಧ ಮಾಡದಿದ್ದರೂ ಪರವಾಗಿಲ್ಲ".

ವನವ ಸುಡುವರು ನಿಮ್ಮ ಹಂಗೇಕೆಂದಳು. ಕೊನೆಗೆ ಶ್ರೀಕೃಷ್ಣನಿಂದ ಯುದ್ದವನ್ನೇ ನಿಶ್ಚಯಿಸಿಕೊಂಡು ಬರುತ್ತೇನೆಂದು ವಚನವನ್ನು ಪಡೆದ ಮೇಲೆಯೇ ಅವಳಿಗೆ ಸಮಾಧಾನವಾದದ್ದು.

ಇಷ್ಟೆಲ್ಲಾ ಆದರೂ, ಪತಿಗಳನ್ನೂ, ಅದರಲ್ಲೂ ಜೂಜಾಡಿ ಸೋತ ಧರ್ಮರಾಜನನ್ನು ಅವಳು ಆಗಾಗ ಕಟೂಕ್ತಿಗಳಿಂದ ಮೂದಲಿಸುತ್ತಿದ್ದಳೆಂಬುದು ನಿಜವಾದರೂ ಅವಳಿಗೆ ತನ್ನ ಪತಿಗಳಲ್ಲಿ ಅಪಾರ ಪ್ರೀತಿಯಿತ್ತು. ಅವರ ಮಾತನ್ನು ಅವಳು ಮೀರುತ್ತಿರಲಿಲ್ಲ. ಅವರ ಗೌರವವನ್ನು ಉಳಿಸಲು ಸದಾ ಪ್ರಯತ್ನಶೀಲಳಾಗಿರುತ್ತಿದ್ದಳು. ಎಂತಹ ಸಂದರ್ಭದಲ್ಲಾದರೂ ರಹಸ್ಯವನ್ನು ಕಾಪಾಡುತ್ತಿದ್ದಳು. ದ್ರೌಪದಿ ಬುದ್ಧಿಮತಿಯೂ ಆಗಿದ್ದಳು. ಪತಿಗಳನ್ನು ಕೇವಲ ಮೊಂಡ ಮಾತುಗಳಿಂದ ಯುದ್ದಕ್ಕೆ ಪ್ರಚೋದಿಸುತ್ತಿರಲಿಲ್ಲ. ಧರ್ಮಬದ್ಧವಾಗಿ, ತರ್ಕಬದ್ಧವಾಗಿ ಮಾತನಾಡುತ್ತಿದ್ದಳು. ಪಾಂಡವರು ಅರಣ್ಯದಲ್ಲಿದ್ದಾಗ ಧರ್ಮರಾಜನನ್ನು ಕಂಡು ಅವಳು ಹೇಳಿದ ಮಾತುಗಳು ತುಂಬಾ ಅರ್ಥಪೂರ್ಣವಾಗಿವೆ. ಕ್ಷಮೆ ಒಳ್ಳೆಯದೇ, ಪರಾಕ್ರಮ ಒಳ್ಳೆಯದೇ ಎನ್ನುವ ಪ್ರಶ್ನೆಹಾಕಿ, ದ್ರೌಪದೀ ತಾನೇ ಉತ್ತರ ಕೊಡುತ್ತಾಳೆ. "ಕ್ಷಮೆಯಾಗಲೀ, ಪರಾಕ್ರಮವಾಗಲಿ ಒಂದೇ. ಸದಾಕಾಲ ಒಳ್ಳೆಯದೆಂದು ಹೇಳುವುದಕ್ಕಾಗುವುದಿಲ್ಲ. ಯಾವಾಗಲೂ ಕ್ಷಮಾಶೀಲನಾಗಿದ್ದರೆ ಆಳುಕಾಳುಗಳು ಸಹ ಅವನಿಗೆ ಲಕ್ಷ್ಯ ಮಾಡುವುದಿಲ್ಲ ಎಂದು ಕ್ಷಮೆಯನ್ನೇ ತೋರಿಸದೆ ರಾಜಸದಿಂದಲೇ ನಡೆಸಿಕೊಳ್ಳುವವನಿಗೆ ಸ್ನೇಹಿತರೊಡನೆಯೂ ಇರಬಾರದು. ಯಾವಾಗಲೂ ಕಠಿಣವಾಗಿಯೂ ಇರಬಾರದು. ಏಕೆಂದರೆ ಎಲ್ಲರೂ ಪಂಡಿತರಾಗಿರುವುದಿಲ್ಲ. ಎಲ್ಲರಲ್ಲಿಯೂ ಮೊದಲು ತಪ್ಪನ್ನು ಕ್ಷಮಿಸಬೇಕು. ಎರಡನೆಯದನ್ನೂ ಶಿಕ್ಷಿಸಬೇಕು. ಕೆಲವು ವೇಳೆ ಲೋಕಕ್ಕೆ ಹೆದರಿಯೂ ಅಪರಾಧಿಗಳನ್ನು ಶಿಕ್ಷಿಸಬೇಕಾಗುತ್ತದೆ. ಆದ್ದರಿಂದ ಕ್ಷಮೆಗೂ ಕಾಲವುಂಟು, ಕಾಠಿಣ್ಯಕ್ಕೂ ಕಾಲವುಂಟು.

ಇದೇ ರೀತಿ ಪ್ರತ್ಯಕ್ಷವಾಗಿ ಫಲ ಕಂಡುಬರುವುದು ಕರ್ಮದಿಂದಲೇ ಹೊರತು ಧರ್ಮದಿಂದಲ್ಲ. ಅದೃಷ್ಟವನ್ನು ನಂಬಿಕೊಂಡು ನಿದ್ರೆ ಹೋಗಿ ಬಿಡುವವನು ನೀರಲ್ಲಿಟ್ಟು ಹಸಿಯ ಮಡಕೆಯಂತೆ ನಾಶ ಹೊಂದುವನು. ಶಕ್ತನು ಕೈಲಾಗದವನಂತೆ ಬಹುಕಾಲ ಸುಮ್ಮನೆ ಕುಳಿತುಕೊಳ್ಳಬಾರದು. ತಕ್ಕಷ್ಟು ಯೋಗ್ಯತೆ

ಇಲ್ಲದಿದ್ದರೆ ಫಲ ಕಡಿಮೆಯಾಗಬಹುದು. ಬರದೆಯೂ ಇರಬಹುದು. ಆದರೆ ಕಾರ್ಯದಲ್ಲಿ ತೊಡಗದೆಯೇ ಇರುವವನಿಗೆ ಯೋಗ್ಯತೆಯೂ ಇಲ್ಲ. ಫಲವೂ ಇಲ್ಲ. ಮನುಷ್ಯನು ತನ್ನನ್ನು ತಾನು ಯಾವಗಲೂ ನಿರಾಕರಿಸಿಕೊಳ್ಳಬಾರದು ಅಂಥವನಿಗೆ ಸುಖವಿಲ್ಲ.

ಇಂತಹ ಮಾತುಗಳು ಎಲ್ಲ ಕಾಲಕ್ಕೂ ಅನ್ವಯಿಸುವಂತಹುದಲ್ಲವೇ ! ಯುದ್ಧವೆಲ್ಲ ಮುಗಿದ ಮೇಲೆ ಜ್ಞಾತಿ ಬಾಂಧವರನ್ನೆಲ್ಲಾ ಕೊಂದು ಪಡೆದ ಈ ರಾಜ್ಯಕ್ಕೆ ರಾಜನಾಗಲೂ ನನಗಿಷ್ಟವಿಲ್ಲ. ನಾನು ರಾಜನಾಗುವುದಿಲ್ಲ ಎಂದು ಧರ್ಮರಾಜ ಹಠ ಹಿಡಿಯುತ್ತಾನೆ. ಯಾರ್ಯಾರು ಎಷ್ಟೆಷ್ಟು ಹೇಳಿದರೂ ಕೇಳುವುದಿಲ್ಲ. ಅಗ ದ್ರೌಪದಿಯೇ ಅವನಿಗೆ ಬುದ್ಧಿ ಹೇಳಿ ಅವನು ಪಟ್ಟಾಭಿಷಿಕ್ತನಾಗಲು ಒಪ್ಪಿಸುತ್ತಾಳೆ.

ಪಾಂಡವರಾದರೂ ದ್ರೌಪದಿಯನ್ನು ಬಹುವಾಗಿ ಗೌರವಿಸುತ್ತಿದ್ದರು. ಶ್ರೀ ಕೃಷ್ಣ ಅವಳ ಪ್ರತಿಜ್ಞೆಯನ್ನು ಪೂರ್ತಿಗೊಳಿಸಲು ಸದಾ ಆತುರನಾಗಿದ್ದ. ಅವಳ ಸಲಹೆಯನ್ನು ಕೇಳದೆ ಯಾವ ಮಂತ್ರಾಲೋಚನೆಗೂ ಮನಸ್ಸು ಮಾಡುತ್ತಿರಲಿಲ್ಲ. ಸಂಗೀತ ಕಲೆಗಳಲ್ಲಿ ಪರಿಣಿತಳಾದ ದ್ರೌಪದಿ ವಿನೋದ ಸ್ವಭಾವದವಳೂ ಹೌದು. ಅವಳ ಹಾಸ್ಯ ಪ್ರವೃತ್ತಿಗೆ ಒಂದೇ ಒಂದು ಉದಾಹರಣೆ ಸಾಕು. ಕೀಚಕ ಉಪ ಕೀಚಕರನ್ನೆಲ್ಲಾ ರಹಸ್ಯವಾಗಿ ಕೊಂದ ಭೀಮ ಯಾರಿಗೂ ಅರಿವಾಗದಂತೆ ಅರಮನೆಯ ಅಡಿಗೆ ಮನೆಯನ್ನು ಪ್ರವೇಶಿಸುತ್ತಾನೆ.

ಊರಿಗೆ ಹಿಂತಿರುಗುತ್ತಿದ್ದ ದ್ರೌಪದಿ ಪಾಕಶಾಲೆಯ ಬಾಗಿಲಲ್ಲಿ ನಿಂತಿದ್ದ ಭೀಮನನ್ನು ಕಂಡು ನಗುತ್ತಾ ಯಾರಿಗೂ ಕೇಳದಂತೆ "ನನ್ನನ್ನು ಬಿಡುಗಡೆ ಮಾಡಿದ ಗಂಧರ್ವರಾಜನಿಗೆ ನಮಸ್ಕಾರ" ಎಂದು ಮುಂದುವರಿಯುತ್ತಾಳೆ. ಅಂತಹ ಸನ್ನಿವೇಶದಲ್ಲಿ ಧೃತಿಗೆಡದೆ ಹೀಗೆ ವಿನೋದದ ನುಡಿಗಳನ್ನಾಡುವುದು ದ್ರೌಪದಿಯಂತ ಮಹಾನುಭಾವೆಯಿಂದ ಮಾತ್ರ ಸಾಧ್ಯ.

**ಮಹಾಭಾರತದಲ್ಲಿ ಸ್ತ್ರೀ ಪಾತ್ರಗಳ ಮತ್ತು ಅವರ ಸಾಂಸ್ಕೃತಿಕ ಅನನ್ಯತೆ**

ನಮ್ಮ ಸಾಂಸ್ಕೃತಿಕ ಪರಂಪರೆಯ ಮಹಾ ಕಾವ್ಯಗಳು ಎಲ್ಲ ಅಕ್ಷಯ ಆಕರವಾಗಿರುವುದೇ ಅಲ್ಲದೆ ಬದುಕಿನ ಸಮಗ್ರ ದರ್ಶನವನ್ನು ಮಾಡಿಸುತ್ತದೆ. ಒಂದು ರಾಷ್ಟ್ರದ ಒಂದು ಜನಾಂಗದ ಸಾಂಸ್ಕೃತಿಕ, ಸಾಮಾಜಿಕ, ಅಧ್ಯಾತ್ಮಿಕ, ಐತಿಹಾಸಿಕ ಅಧ್ಯಯನಕ್ಕೆ ಇವು ಮಹತ್ವದ ಸಾಮಗ್ರಿಯನ್ನು ಒದಗಿಸುತ್ತವೆ. ಕಾರಣ ಮಹಾಕಾವ್ಯ ಕರ್ತೃಗಳ ಅಥವಾ ಕವಿಗಳು ತಾವು ರಚಿಸುವ ಕಾವ್ಯಗಳಲ್ಲಿ ತಮ್ಮ ಸಮಕಾಲೀನ ಸಮಾಜದ ಸ್ವರೂಪವನ್ನು ಅದರ ವಿವಿಧ ಮಗ್ಗುಲುಗಳೊಂದಿಗೆ ಬಿಂಬಿಸುವ ಅನಿವಾರ್ಯತೆಗೆ ಒಳಗಾಗಿಯೇ ಇರುತ್ತಾರೆ. ತಮ್ಮ ಕಾವ್ಯಗಳಲ್ಲಿನ ಪಾತ್ರಗಳು, ಸನ್ನಿವೇಶ, ಸಂದರ್ಭಗಳ ಮೂಲಕವೇ ಅಂದಂದಿನ ಜೀವನ ವಿಧಾನ, ಆಚಾರ, ವಿಚಾರ, ಅಧ್ಯಾತ್ಮಿಕ ಚಿಂತನೆಗಳ ದರ್ಶನಕ್ಕೆ ಒಂದು ಬೃಹತ್ ವೇದಿಕೆಯನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ವಿವಿಧ ಗುಣ, ಸ್ವಭಾವ ಮನೋಧರ್ಮಗಳುಳ್ಳ ಮನುಷ್ಯ ಲೋಕವೊಂದು ವಿಭಿನ್ನ ಸನ್ನಿವೇಶ ಸಂದರ್ಭಗಳ

ಮೂಲಕ ತೆರೆದುಕೊಳ್ಳುತ್ತದೆ. ಸ್ತ್ರೀ ಪುರುಷರಾದಿಯಾಗಿ ಸಂದರ್ಭ ಸನ್ನಿವೇಶ ಪರಿಸ್ಥಿತಿಗಳ ಒತ್ತಡಕ್ಕೆ ಒಳಗಾಗಿ ಅನಿವಾರ್ಯವಾಗಿ ತಮ್ಮ ಸ್ವಭಾವ ಧರ್ಮಕ್ಕಿಂತ ಬೇರೆಯಾಗಿಯೇ ಬದುಕಬೇಕಾಗುತ್ತದೆ. ಪುರುಷರ ಬದುಕಿನ ಸಂಘರ್ಷಗಳ ಭಾಗವಾಗಿ ಅಥವಾ ಪರಿಣಾಮವಾಗಿ ಈ ಕಾವ್ಯದಲ್ಲಿ ಕಾಣಿಸಿಕೊಳ್ಳುವ ಸ್ತ್ರೀಯರು ಅಗ್ನಿ ಪರೀಕ್ಷೆಗಳನ್ನು ಹಾದು ಬರುವಂತಹ ಸನ್ನಿವೇಶಗಳಿಗೆ ಮುಖಾಮುಖಿಯಾಗುತ್ತಾರೆ. ಪುರುಷರ ದೌರ್ಜನ್ಯ, ದಬ್ಬಾಳಿಕೆಗಳಿಗೆ ಒಳಗಾಗಿ ಹಿಂಸೆಯನ್ನು, ಕ್ರೌರ್ಯವನ್ನು, ಮಾನಸಿಕ ಯಾತನೆಯನ್ನು ಅನುಭವಿಸುತ್ತಾರೆ. ಒಂದೊಂದು ಹೆಣ್ಣು ಒಂದೊಂದು ರೀತಿಯಲ್ಲಿ ಸಮಾಜದಲ್ಲಿ ಪುರುಷ ವರ್ಗದ ನಿರ್ಲಕ್ಷ್ಯ, ಅವಮಾನ, ಅವಹೇಳನಗಳಿಗೆ ಗುರಿಯಾಗಿ ನರಳಬೇಕಾಗುತ್ತದೆ. ಸತ್ಯವತಿ, ದ್ರೌಪದಿ, ಕುಂತಿ, ಮಾದ್ರಿ, ಗಾಂಧಾರಿ, ಅಂಬೆ, ಅಂಬಿಕೆ, ಅಂಬಾಲಿಕೆ, ಸುದೇಷ್ಣೆ – ಮುಂತಾಗಿ ಒಂದು ವಿಸ್ತಾರವಾಗಿ ಸ್ತ್ರೀಲೋಕವೊಂದು ಗೋಚರಿಸುತ್ತದೆ. ಮಹಿಳೆಯರ ಅಥವಾ ಸ್ತ್ರೀ ವಿಚಾರದಲ್ಲಿ ಏಕ ಕಾಲದಲ್ಲಿ ನಮಗೆ ಸಾಮಾಜಿಕ ನಿಯಮಗಳು ದ್ವಂದ್ವ ಸ್ಥಿತಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಅದೇ ರೀತಿ ದ್ರೌಪದಿಯ ವಿಚಾರಕ್ಕೆ ಬಂದರಂತೂ ಹೃದಯಗಳು ವಿಷಾದದಿಂದ ತುಂಬಿ ಹೋಗುತ್ತವೆ. ಪಾಂಡವರಂತಹ ಶೌರ್ಯ, ಸಾಹಸ, ಧರ್ಮನಿಷ್ಠ ಪುರುಷರು, ಅದೂ ಒಬ್ಬರಲ್ಲ, ಐದು ಜನವಿದ್ದರೂ ಬೆನ್ನಲ್ಲೇ ಬಂದ ಕಷ್ಟ ಪರಂಪರೆಗಳಿಂದ ಬಿಡುಗಡೆಯೇ ಇಲ್ಲದಂತಾಗುತ್ತದೆ. ಒಂದಾದ ಮೇಲೊಂದರಂತೆ ವಿಧಿಯ ಚೀಸುಗಳು ಅವಳನ್ನು ಜರ್ಝರಿತಗೊಳಿಸಿದರೂ ಅವುಗಳನ್ನು ಒಪ್ಪಿಕೊಳ್ಳದೆ ಬೇರೆ ದಾರಿ ಕಾಣುವುದಿಲ್ಲ. ಅಗ್ನಿಕನ್ಯೆಯಾಗಿ, ದ್ರುಪದನ ಮಗಳಾಗಿ ಹುಟ್ಟಿದರೂ, ವಿಧಿ ಅವಳನ್ನು ವಿಚಿತ್ರವಾಗಿ ಬೇಟೆಯಾಡುತ್ತದೆ. ಅರಗಿನ ಮನೆಯ ಬೆಂಕಿ ಅನಾಹುತದಿಂದ ಪಾರಾಗಿ ವೇಷಾಂತರದಲ್ಲಿ ಇದ್ದ ಪಾಂಡವ ಮಧ್ಯಮ ಅರ್ಜುನ ದ್ರೌಪದಿಯನ್ನು ಸ್ವಯಂವರ ಸ್ಪರ್ಧೆಯಲ್ಲಿ ಗೆದ್ದು ತಂದರೂ, ತಂದದ್ದನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳಿ ಎಂದು ತಂದದ್ದೇನೆಂದು ಅರಿಯದೆ, ಹೇಳಿದ ಕುಂತಿಯ ಮಾತಿಗೆ ಕಟ್ಟು ಬಿದ್ದು ಐದೂ ಜನರನ್ನು ಗಂಡಂದಿರಾಗಿ ಸ್ವೀಕರಿಸಿದವಳಿಗೆ ಪಂಚ ಪುರುಷರಿಂದ ಹೆಚ್ಚಿನ ಸುಖ, ರಕ್ಷಣೆಗಳು ಸಿಗಬಹುದೆಂಬ ಕಲ್ಪನೆಗೆ ವಿರುದ್ಧವಾಗಿ ಹೆಚ್ಚಿನ ಕಷ್ಟಗಳು, ಅಭದ್ರತೆಗಳು ಮಾತ್ರವೇ ಅವಳ ಪಾಲಿಗೆ ಬರುತ್ತವೆ.

ಧರ್ಮರಾಯನ ಧರ್ಮನಿಷ್ಠೆ, ಭೀಮಾರ್ಜುನರ ತೋಳ್ಬಲ, ನಕುಲ ಸಹದೇವರ ಜ್ಞಾನ ದೃಷ್ಟಿ – ಯಾವುದೂ ಅವಳ ರಕ್ಷಣೆಗೆ ಬರುವುದಿಲ್ಲ. ಸ್ತ್ರೀಯರು ಪುರುಷರ ಅಧೀನ ; ಅವರ ಹಕ್ಕು ಪುರುಷರ ಆಸ್ತಿ. ಆದ್ದರಿಂದಲೇ ಅವರ ಮೇಲೆ ಅಧಿಕಾರ ಎಂಬ ವಿಚಾರ ಭಾವನೆಗಳು ಪ್ರಚಲಿತವಿರುವ ಸಾಮಾಜಿಕ ಪರಿಸರದಲ್ಲಿ, ಧರ್ಮಶಾಸ್ತ್ರಗಳ ವಿಧೇಯಕಗಳಲ್ಲಿ ಪ್ರಚಲಿತವಿರುವ ಸಂದರ್ಭದಲ್ಲಿ ಧರ್ಮರಾಯನು ಜೂಜಿನಾಟದಲ್ಲಿ ಅವಳನ್ನು ಪಣವಾಗಿರಿಸಿ ಸೋತದ್ದೂ ಪ್ರಶ್ನಾತೀತವಾಗುತ್ತದೆ. ಕಳೆದುಕೊಂಡ ಮೇಲೆ

ಎದುರಾಳಿಯ ಹಸ್ತಾಂತರವಾಗುತ್ತದೆ. ಹಸ್ತಾಂತರವಾಗಿ ತನ್ನ ಕೈಗೆ ದಕ್ಕಿದ ದ್ರೌಪದಿ ದುರ್ಯೋಧನನ ಹಕ್ಕಿನ ವ್ಯಾಪ್ತಿಗೆ ಬರುತ್ತಾಳೆ. ಆದ್ದರಿಂದಲೇ ದ್ರೌಪದಿ ತುಂಬಿದ ಸಭೆಯಲ್ಲಿ, ಗುರು ಹಿರಿಯರು, ಪ್ರಾಜ್ಞ ಪ್ರತಿನಿಧಿಗಳ ಸಮಕ್ಷಮದಲ್ಲಿ ದುರ್ಯೋಧನ, ದುಶ್ಯಾಸನ, ಕರ್ಣ, ಶಕುನಿ ಮುಂತಾದವರಿಂದ ಅಸಭ್ಯ ಮಾತುಗಳಿಂದ, ವಸ್ತ್ರಾಪಹರಣದಂತಹ ಅಮಾನುಷ ಕೃತ್ಯಗಳಿಂದ ಅವಮಾನಿತಳಾಗುತ್ತಿದ್ದರೂ ಯಾರೊಬ್ಬರೂ ಅವಳ ಸಹಾಯಕ್ಕೆ ಧಾವಿಸಲಿಲ್ಲ. ಸಭೆಗೆ ಸಭೆಯೇ ನಾಚಿಕೊಳ್ಳುವಂತೆ ವಿವಸ್ತ್ರಗೊಳಿಸಲಾಗುತ್ತಿದ್ದರೂ ದುಃಖಾರ್ತಳಾಗಿ, ಕೋಪಾವಿಷ್ಟಳಾಗಿ, ಶಾಸ್ತ್ರಪರಿಣತರೂ, ಜ್ಞಾನ ವೃದ್ಧರೂ, ವಯೋವೃದ್ಧರೂ, ನೀತಿವೃದ್ಧರೂ ಮುಂತಾದವರೆಲ್ಲರೂ ಇದ್ದು ತನ್ನ ಈ ಸ್ಥಿತಿಗೆ ತಾವೇಕೆ ಸ್ಪಂದಿಸುತ್ತಿಲ್ಲವೆಂದು, ಇದನ್ನೇಕೆ ವಿರೋಧಿಸುತ್ತಿಲ್ಲವೆಂದು ಹಾಕಿದ ಸವಾಲಿಗೆ ಮೌನವೇ ಉತ್ತರವಾಗುತ್ತದೆ. ಯಾಕೆಂದರೆ ಇದರಲ್ಲಿ ಯಾವ ತರ್ಕವೂ ಸಮರ್ಥನೆಗೆ ಬರುವುದಿಲ್ಲ. ಆಟದ ನಿಯಮದಂತೆ ಸೋತ ವಸ್ತುಗಳ ಮೇಲೆ ಕೌರವನದೆ ಹಕ್ಕು. ದ್ರೌಪದಿ ಹೆಣ್ಣಾದರೂ, ಸಮಾಜದಲ್ಲಿ ಅವಳೂ ವಸ್ತುಗಳೊಂದಿಗೆ ಸಮೀಕೃತಳಾಗಿದ್ದಾಳೆ. ಧರ್ಮರಾಯನ ಸೋತ, ಕೌರವ ಗೆದ್ದ. ಗೆದ್ದಿದ್ದನ್ನು ಹೇಗೆ ಬೇಕಾದರೂ ಬಳಸಿಕೊಳ್ಳಬಹುದಾದ್ದರಿಂದ ಎಲ್ಲರ ಬಾಯಿ ಕಟ್ಟಿ ಹೋಗಿತ್ತು. ಅದೃಷ್ಟವಶಾತ್ ಭೀಮನೊಬ್ಬ ಅವಳ ಅಸಹಾಯಕ ಸ್ಥಿತಿಗೆ ಮರುಗಿ ಅಣ್ಣನನ್ನು ಧಿಕ್ಕರಿಸಿ ದುಶ್ಯಾಸನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಮುಂದೆ ವಿರಾಟ ಪರ್ವದಲ್ಲಿಯೂ ಕೀಚಕನ ಉಪಟಳದಿಂದ ತಪ್ಪಿಸಲು ಅವನೇ ಮುಂದಾಗುತ್ತಾನೆ. ಮೊದಲಿನಿಂದ ಕಡೆಯ ತನಕ ವನವಾಸ, ಅಜ್ಞಾತವಾಸಗಳೇ ಅವಳ ಹಣೆಬರಹವಾಗುತ್ತದೆ.

ಯುದ್ಧದಲ್ಲಿ ಅಶ್ವತ್ಥಾಮನ ಅವಿವೇಕದಿಂದ ತನ್ನ ಐದು ಜನ ಮಕ್ಕಳನ್ನು ಒಂದೇ ಸಲಕ್ಕೆ ಕಳೆದುಕೊಂಡು ತೀವ್ರವಾದ ಪುತ್ರಶೋಕಕ್ಕೆ ಒಳಗಾಗುತ್ತಾಳೆ. ಅವಳಲ್ಲಿ ಪ್ರತಿಭಟನಾತ್ಮಕ ಧೋರಣೆಯಿದ್ದರೂ ಪರಿಸ್ಥಿತಿಯ ಕೈಗೊಂಬೆಯಾಗಿ ನೋವಿನ ನಂಜನ್ನು ನುಂಗಿ ಬದುಕುತ್ತಾಳೆ.

ದ್ರೌಪದಿ, ಗಾಂಧಾರಿ, ಕುಂತಿ, ಮಾದ್ರಿ, ಗಂಗೆ, ಸತ್ಯವತಿ, ಚಿತ್ರಾಂಗದೆ, ಅಂಬೆ, ಭಾನುಮತಿ ಹೀಗೆ ಇವರೆಲ್ಲ ಮಹಾಭಾರತದ ಕಥೆಯ ಮುನ್ನಡೆಗೆ ಕಾರಣರಾಗುತ್ತಾರದರೂ ಇವರು ಯಾರಿಗೂ ಸಾಂಸಾರಿಕ ಸುಖವಾಗಲೀ, ದೀರ್ಘದಾಂಪತ್ಯದ ಅದೃಷ್ಟವಾಗಲಿ ಇಲ್ಲದೆ ಬದುಕುತ್ತಾರೆ. ಪುರುಷರ ಅಹಂಕಾರ ಉದ್ಧಟತನ, ಅವಿವೇಕ, ಕಾಮಾಸಕ್ತಿ ಮತ್ತು ಸಾಮಾಜಿಕ ಧಾರ್ಮಿಕ ನಿರ್ಬಂಧಗಳು ಅವರನ್ನು ಜೀವನದುದ್ದಕ್ಕೂ ನರಳುವಂತೆ ಮಾಡುತ್ತವೆ. (ತಮ್ಮ ಸ್ವಂತವಿಚಾರ, ವೈಯಕ್ತಿಕ ವಿಕಾಸನಗಳಿಗೆ ತಮ್ಮ ಗಂಡಂದಿರ ಅವಿವೇಕ, ಆರ್ಭಟ, ದೌರ್ಜನ್ಯ ದುಷ್ಟತನಗಳನ್ನು ನಿವಾರಿಸಲು ಆಪ್ತ ಸಲಹೆಗಳನ್ನು ಹೊಣೆಗಾರಿಕೆಗೆ ಗುರಿಯಾಗುತ್ತಾರೆ.

ಪುರುಷ, ಸಮಾಜ ವಿಧಿಸುವ ನಿಯಮಗಳಿಗೆ, ನಿರ್ದೇಶನಗಳಿಗೆ ಬದ್ಧರಾಗಿ ನಡೆಯುವುದಷ್ಟೇ ತಮ್ಮ ಪಾಲಿನ ಕರ್ತವ್ಯವೆಂದೂ, ಪಾತಿವ್ರತ್ಯ ಧರ್ಮವೆಂದು ನಂಬಿ ನಡೆಯುತ್ತಾರೆ. ತಮ್ಮ ಇಚ್ಛೆಗೆ ವಿರುದ್ಧವಾಗಿ ಪುರುಷಾಧಿಕಾರ ಚಲಾವಣೆಯ ಪ್ರಯತ್ನದಲ್ಲಿ ಕಳೆದುಕೊಳ್ಳುವ ದುರಾದೃಷ್ಟ, ದುರಂತಗಳು ಅವರ ಬದುಕಿನ ಸಂಗಾತಿಗಳಾಗಿ ಬರುತ್ತವೆ.

ಅದೇ ರೀತಿ ದ್ರೌಪದಿಯ ಜೀವನದಲ್ಲಿ ಬಂದಂತಹ ಘಟನೆಗಳಿಗೆ ಅವಳೇ ಹೊಣೆಯಾಗಿರುತ್ತಾಳೆ. ಕಾರಣ ಅರ್ಜುನನ ಮೋಹಿಸದೆ ಸುಮ್ಮನಿರುತ್ತಾಳೆ. ಅದಕ್ಕೆ ಅರ್ಜುನ ಸಂಪೂರ್ಣವಾಗಿ ದ್ರೌಪದಿಯನ್ನು ನಿರ್ಲಕ್ಷಿಸಿ, ಚಿತ್ರಾಂಗದೆಯನ್ನು ಪ್ರೀತಿಸಿ ಮದುವೆಯಾಗುತ್ತಾನೆ.

ಮುಖ್ಯ ಕಥಾನಕದಲ್ಲಿ ಮಹಿಳೆಯರು ಅಥವಾ ಸ್ತ್ರೀಯರು ಪೂರಕ ಪಾತ್ರಗಳಾಗಿ ಇಲ್ಲವೆ ಕೆಲವೊಮ್ಮೆ ಕಥೆಯ ಬೆಳವಣಿಗೆಗೆ ಸಹಕರಿಸುವ ರೀತಿಯಲ್ಲಿ ಅಪರೂಪಕ್ಕೆ ಕಾಣಿಸಿಕೊಳ್ಳುತ್ತಾರೆ. ದ್ರೌಪದಿಯೊಬ್ಬಳನ್ನು ಬಿಟ್ಟರೆ ಮಿಕ್ಕ ಸ್ತ್ರೀಯರು ಪ್ರಾಸಂಗಿಕವಾಗಿ ಪ್ರಸ್ತಾಪಗೊಳ್ಳುತ್ತಾರೆ. ಇವರ ಜೊತೆಗೆ ಹದಿನೆಂಟು ಪರ್ವಗಳಲ್ಲಿ ಒಂದು ಸ್ತ್ರೀ ಪರ್ವವೆಂದು ಮೀಸಲಿದ್ದರೂ ಇಲ್ಲಿ ಅವರೆಲ್ಲ ತಮ್ಮ ತಮ್ಮ ಮನೆಯ ಗಂಡಸರನ್ನು ಕಳೆದುಕೊಂಡಿದ್ದು ಹೆಣಗಳಾಗಿ ಬಿದ್ದ ಅವರನ್ನು ಅರಸುತ್ತಾ ಶೋಕತಪ್ತರಾಗುತ್ತಿರುವುದನ್ನು ಮಾತ್ರವೇ ಕಾಣುತ್ತೇವೆ

ಕುಂತಿ, ಗಾಂಧಾರಿ, ದ್ರೌಪದಿ, ಭಾನುಮತಿ ಮುಂತಾದವರು ಪರಸ್ಪರ ಈ ದುಃಖಾರ್ತ ಸನ್ನಿವೇಶದಲ್ಲಿ ರೋಧಿಸಲು ಸಾಂತ್ವನ ಪಡೆಯಲು, ಪಡಿಸಲು ಮಾತ್ರವೇ ಮುಖಾ ಮುಖಿಯಾಗುತ್ತಾರೆ. ಅವರ ಶೋಕದ ತೀವ್ರತೆ ಅಸಹಾಯಕತೆ, ಅನಾತಥೆ, ಅರ್ತಥೆಗಳು ಮನಕರಗುವಂತೆ ಗೋಚರಿಸುತ್ತವೆ.

ಹೀಗೆ ಮಹಾಭಾರತದಲ್ಲಿ ಮುಖ್ಯ ಕಥಾನಕದ ಅಂಗವಾಗಿ ಮತ್ತು ಅದರ ವ್ಯಾಪ್ತಿಯ ಅಂತರ್ಗತವಾಗಿ ಸ್ತ್ರೀ ಪಾತ್ರಗಳು ಕಾಣಿಸಿಕೊಂಡು, ಅವರ ನಿಲುವು ನಡವಳಿಕೆಗಳ ಮುಖಾಂತರ ಅಂದಿನ ಸಮಾಜದಲ್ಲಿ ಸ್ತ್ರೀಯರ ವಿಚಾರದಲ್ಲಿ ಇದ್ದಿರಬಹುದಾದ ನೀತಿ ನಿಯಮ ನಿರ್ಬಂಧಗಳು ಸೂಕ್ಷ್ಮವಾಗಿ ಗೋಚರಿಸುತ್ತವೆಯೇ ಹೊರತಾಗಿ ಸ್ತ್ರೀ ಸಮಾಜದ ಒಟ್ಟು ಸ್ವರೂಪದ ಸಮಗ್ರ ಚಿತ್ರ ನಮಗೆ ಸಾಧ್ಯವಾಗುವುದಿಲ್ಲ. ರಾಜ ಮನೆತನದ ಹೆಂಗಸರಿಗೆ ಸಾಮಾನ್ಯ ಹೆಂಗಸರಿಗಿಂತ ಹೆಚ್ಚಿನ ಜವಾಬ್ದಾರಿ, ವಂಶಗೌರವ, ಕುಲ ಗೌರವಗಳ ಕಾಳಜಿ ಇರುವುದು ಸಹಜ. ಆದ್ದರಿಂದ ಅಂದಿನ ಸಮಾಜದ ಸ್ತ್ರೀಪರ ನಿಲುವುಗಳ ಬಗ್ಗೆ ನಮಗೆ ಸ್ಪಷ್ಟ ಚಿತ್ರಣ ದೊರೆಯಲು ಸಾಧ್ಯವಾಗುವುದಿಲ್ಲ. ಆದರೂ ವ್ಯಾಸರು 'ಸ್ತ್ರೀ' ವಿಚಾರದಲ್ಲಿ ಪ್ರತಿನಿಧಿಕವಾಗಿ ಕೆಲವು ಆಲೋಚನೆಗಳನ್ನು ಹೊಂದಿದ್ದ ಸಾಧ್ಯತೆ. ಅಲ್ಲಲ್ಲಿ ಸಾಂದರ್ಭಿಕವಾಗಿ ಸ್ತ್ರೀಯರ ಬಗ್ಗೆ ಹೇಳಿರುವ ಮಾತುಗಳು ಅಂದಿನ ಒಟ್ಟು ಸಮಾಜದ ಅಭಿಪ್ರಾಯಗಳು ಆಗಿರುವ ಅವಕಾಶಗಳಿವೆ.

ವ್ಯಾಸರಿಗೆ ಸ್ತ್ರೀ ಸ್ವಭಾವದ ನಾನ ಮುಖಗಳ ಕಲ್ಪನೆಯಿದೆ. ಸ್ತ್ರೀಯರ ಬಗ್ಗೆ ಧರ್ಮಶಾಸ್ತ್ರಗಳಲ್ಲಿ ಎಂದೂ ಒಳ್ಳೆಯ ಅಭಿಪ್ರಾಯವಿಲ್ಲ. ಪುರುಷನ ಅಧಃಪತನಕ್ಕೆ ನರಕಕ್ಕೆ ಅವಳೇ ಕಾರಣಳೆಂಬ ಜನಜನಿತ ಅಭಿಪ್ರಾಯವಿರುವಾಗ ವ್ಯಾಸರು ಅನೇಕ ಕಡೆ ಸ್ತ್ರೀ ಪರವಾಗಿ ಉದಾತ್ತ ಮನೋಭಾವವಿರಿಸಿಕೊಂಡಿರುವುದು ಗೋಚರಿಸುತ್ತವೆ. ಅವರ ದೃಷ್ಟಿಯಲ್ಲಿ ಸ್ತ್ರೀ ಲಕ್ಷ್ಮೀ ಸ್ವರೂಪಳು. ಸ್ತ್ರೀಯರಲ್ಲಿ ಎಲ್ಲರೂ ಕೆಟ್ಟವರಲ್ಲ. ಸುಶೀಲೆಯರೂ, ಸೌಜನ್ಯಶೀಲರೂ ಲೋಕಮಾತೆಯರೂ ಉದಾತ್ತ ಜೀವಿಗಳು ಆಗಿರುವುದನ್ನು ಗಮನಿಸಿದ್ದಾರೆ.

ಹೆಣ್ಣಿಗೆ ಆಪತ್ತು ಬಂದಾಗ, ಅವಮಾನವಾದಾಗ ಶೀಲಭಂಗ ಉಂಟಾದಾಗ ಪುರುಷನಾದವನು ಕಾಪಾಡುವುದು ಧರ್ಮ, ಕರ್ತವ್ಯ. ಪುರುಷನು ಪರಸ್ತ್ರೀಯರಿಗೆ ಆಶಿಸುವುದೆಂದರೆ ದುರ್ಗತಿಯನ್ನು ಆಹ್ವಾನಿಸಿದಂತೆ – ಎಂದು ಸ್ತ್ರೀಯರ ವಿಚಾರವಾಗಿ ಏನೆಲ್ಲ ಉದಾತ್ತವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರಾದರೂ ನಮಗೆ ಕಥಾ ಹಂದರದೊಳಗೆ ಕಾಣುವ ಸ್ತ್ರೀ ಪಾತ್ರಗಳು ನಿಂತರೆ ನೋವು, ದುಃಖ, ಅನ್ಯಾಯ, ಅವಮಾನಗಳನ್ನು ಎದುರಿಸುತ್ತಾ ಭೀಕರ ಪರಿಣಾಮಗಳಿಗಾಗಿ ಪರಿತಪಿಸುತ್ತಾ, ಆತ್ಮಜರ, ಆತ್ಮೀಯರ, ಕೈಹಿಡಿದವರ ಸಾವಿನಿಂದಾಗಿ ಶೋಕಾಗ್ನಿಯಲ್ಲಿ ಬೇಯುತ್ತಾ ಅಸಹಾಯಕರಾಗಿ ನರಳಿ ನವೆಯುವುದನ್ನೇ ಕಾಣುತ್ತೇವೆ. ಪಾತಿವ್ರತ್ಯವೊಂದು ಅವರನ್ನು ಮಣಿಸುವ ದಂಡವಾಗಿ, ನೋವು ನುಂಗಲು ಆಧಾರವಾಗಿ ಅವರ ಪಾಲಿಗೆ ದಕ್ಕುತ್ತದೆ.

ಒಂದಲ್ಲ ಒಂದು ರೀತಿಯಲ್ಲಿ ಮಹಾಭಾರತದಲ್ಲಿ ಬರುವ ಸ್ತ್ರೀ ಪಾತ್ರಗಳೆಲ್ಲವೂ ನಮ್ಮ ಸಹಾನುಭೂತಿ, ಮರುಕ, ಮೆಚ್ಚುಗೆಗಳನ್ನು ಬಯಸುತ್ತವೆ. ವ್ಯಾಸರು ಸ್ತ್ರೀಯರ ಬಗ್ಗೆ ಸಾಂದರ್ಭಿಕವಾಗಿ ಉದಾತವಾದ ಮಾತುಗಳನ್ನೇ ಹೇಳಿದ್ದರಾದರೂ ಹಿಂದಿನಿಂದ ನಂಬಿಕೊಂಡು ಬಂದ ಪಾತಿವ್ರತ್ಯ ಧರ್ಮವನ್ನು ಹೆಚ್ಚು ಪುರಸ್ಕರಿಸಿ ಒತ್ತು ನೀಡಿದ್ದಾರೆ. ಜೊತೆ ಜೊತೆಗೆ ಸತಿಗೆ ಪಾತಿವ್ರತ್ಯ ಧರ್ಮ ಎಷ್ಟು ಮುಖ್ಯವೋ ಪತಿನಿಷ್ಠೆ ಅಷ್ಟೆ ಮುಖ್ಯವಾಗುತ್ತದೆಂದು ಹೇಳುವುದರ ಮೂಲಕ ತಮ್ಮ ನಿಷ್ಪಕ್ಷವಾದ ಉದಾರ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ.

ಮಹಾಭಾರತದಲ್ಲಿನ ಸ್ತ್ರೀಯರು ಯಾಜಮಾನ್ಯ ಸಂಸ್ಕೃತಿಯ ಪರಿಧಿಯೊಳಗಿನಿಂದಲೇ ಸಾಧ್ಯವಾದಲ್ಲೆಲ್ಲ ತಮ್ಮ ಸ್ತ್ರೀಜಾತಿಯ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಅಂಬೆ, ದ್ರೌಪದಿ ಮೊದಲಾದ ಅನೇಕ ಸ್ತ್ರೀಯರು ಕಲವು ಅನಿವಾರ್ಯ, ಸನ್ನಿವೇಶ, ಸಂದರ್ಭಗಳಲಿ ತಮ್ಮ ಬುದ್ಧಿಮತ್ತೆಯನ್ನು ರಾಜಕೀಯ ಜಾಣೆಯನ್ನು ವ್ಯವಹಾರ ಜ್ಞಾನವನ್ನು ಅನ್ಯಾಯದ ವಿರುದ್ದ ಪ್ರತಿಭಟನೆಯನ್ನು ತೋರಿದ್ದಾರೆ. ದ್ರೌಪದಿಯಂತೂ ಜನ್ಮಜಾತ ಪುರುಷ ವ್ಯಕ್ತಿತ್ವಕ್ಕೆ ನಿದರ್ಶನವಾಗಿ ಅನೇಕ ಸಂದರ್ಭಗಳಲ್ಲಿ

ಗಂಡಂದಿರನ್ನು ತರಾಟೆಗೆ ತೆಗೆದುಕೊಂಡದ್ದನ್ನೂ, ತುಂಬಿದ ಸಭೆಯಲ್ಲಿ ಕುಳಿತ ಸಭಾಸದರನ್ನು, ಹಿರಿಯರನ್ನು ಅವರ ಕಾಪುರುಷತ್ವಕ್ಕಾಗಿ ಸವಾಲು ಹಾಕುತ್ತಾಳೆ. ಹೀಗೆ ಇಲ್ಲಿನ ಸ್ತ್ರೀ ಪಾತ್ರಗಳು ಒಂದು ನಿರ್ಧಿಷ್ಟ ನೆಲೆಗಳ ಮೂಲಕ ಅನನ್ಯರಾಗಿ ಉಳಿಯುತ್ತಾರೆ.

**ಸ್ನೇಹದ ಸೊಬಗು**

[ಕೃಷ್ಣ ಮತ್ತು ದ್ರೌಪದಿ ಅಣ್ಣ ತಂಗಿಯರೋ, ಸ್ನೇಹಿತರೋ ಎಂಬ ತೀವ್ರವಾದ ನೆಲೆಯಲ್ಲಿ ಅವರದ್ದು, ಹಾಗದರೆ ಗೆಳೆಯ ಗಳತಿಯ ಸಂಬಂಧವೇ, ಭಾರತೀಯ ಸಂದರ್ಭದಲ್ಲಿ ಯವ್ವನಿಗರಾದ ಸ್ತ್ರೀ ಪುರುಷರ ಸಂಬಂಧಕ್ಕೆ ಸೋದರತ್ವ ಎನ್ನುವ ಹೆಸರು ಕ್ಷೇಮರಕ್ಷೆ]

ಒಂದು ಸ್ನೇಹದ ಹಿಂದೆ ಸ್ನೇಹ ಮಾತ್ರ ಇರುತ್ತದೆಯೇ? ಇದು ಮನಸ್ಸನ್ನು ತ್ರಾಸ್ತಗೊಳಿಸುವ ಪ್ರಶ್ನೆ. ಇಂಥ ಪ್ರಶ್ನೆ ಕೇಳಿಕೊಳ್ಳದಿರುವುದೇ ಕ್ಷೇಮ ಎಂಬುದಾಗಿ ಅನೇಕ ಬಾರಿ ಅನ್ನಿಸುತ್ತೆ. ಆದರೆ ಕೆಲವು ಮುಜುಗರವುಂಟು ಮಾಡುವ ಪ್ರಶ್ನೆಗಳನ್ನು ಕೇಳಿಕೊಳ್ಳುವ ಅಗತ್ಯವೂ ಇದೆ. ಕಣ್ಣಿನ ಪೊರೆಹರಿಯುವುದಕ್ಕೆ ಅಗತ್ಯವಾದ ಶಸ್ತ್ರಚಿಕಿತ್ಸೆಯಂತೆ ಇದು. ಒಮ್ಮೆ ಪೊರೆ ಹರಿಯಿತು ಅಂದರೆ ಆಮೇಲೆ ಕನ್ನಡಕದ ಅಗತ್ಯ ಬೀಳುವುದಿಲ್ಲ. ಬರಿಗಣ್ಣಿಂದ ಕುಕ್ಕುವ ಬೆಳಕು ನೋಡುವ ಶಕ್ತಿ ಬರುತ್ತದೆ. ಸಂಗತಿಯನ್ನು ಸರಿಯಾದ ಪರಿಪ್ರೇಕ್ಷ್ಯದಲ್ಲಿ ತೆಗೆದುಕೊಳ್ಳುವುದಕ್ಕೂ ಇದು ಸಹಾಯ ಮಾಡುತ್ತದೆ. ಸರಿಯಾದ ಅರಿವು ಮನಸ್ಸಿನ ವಿಕ್ಷಿಪ್ತತೆಯನ್ನು ದೂರಮಾಡಿ ಮನಸ್ಸನ್ನು ಸಹಜ ಸಮಾಧಾನ ಸ್ಥಿತಿಯ ಸಂಪಾದನೆ.

ನನಗೊಬ್ಬ ಬಾಲ್ಯದ ಗೆಳಯನಿದ್ದ. ನಾವಿಬ್ಬರೂ ಒಬ್ಬರನ್ನೊಬ್ಬರು ತುಂಬ ಹಂಚಿಕೊಂಡಿದ್ದೆವು. ನಾವು ಒಬ್ಬರನ್ನೊಬ್ಬರು ಅಗಲಿ ಬದುಕಲಾರೆವು ಅಂದುಕೊಂಡಿದ್ದೆ. ಆದರೆ ಬದುಕಿನ ಪ್ರವಾಹ ನಮ್ಮನ್ನು ಬೇರೆ ಬೇರೆ ದಿಕ್ಕಿಗೆ ಕೊಚ್ಚಿಕೊಂಡು ಹೋಯಿತು. ಬಹಳ ವರ್ಷಗಳ ನಂತರ ಈಗ ನಾವು ಒಂದೇ ಊರಲ್ಲಿ ಇದ್ದೇವೆ. ನಮ್ಮ ಹಳೆಯ ಸ್ನೇಹವನ್ನು ಊರ್ಜಿತಗೊಳಿಸುವ ಯತ್ನವನ್ನು ನಾವು ಮಾಡಿಯೂ ವಿಫಲರಾಗಿದ್ದೇವೆ. ನಮ್ಮ ಆಸಕ್ತಿಗಳು ಬದಲಾಗಿವೆ. ನಮ್ಮ ಆದ್ಯತೆಗಳು ಬದಲಾಗಿದ್ದಾವೆ. ನಾವು ಒಬ್ಬರಿಗೊಬ್ಬರು ಅಗತ್ಯ ಮತ್ತು ಅನಿವಾರ್ಯವೆನ್ನಿಸದ ಘಟ್ಟಕ್ಕೆ ಬಂದು ನಿಂತಿದ್ದೇವೆ. ಅಕಸ್ಮಾತ್ ನಾವು ಭೆಟ್ಟಿಯಾದಾಗ ವಿದ್ಯುತ್ ಸಂಪರ್ಕ ತಪ್ಪಿದ ತಂತಿಗಳ ಜೋಡಣೆ ಮಾಡಿದ ಹಾಗೆ ಒಳಗೆ ಏನೋ ಮುಕ್ತಾಯಕ್ಕೆ ಬರುತ್ತೇವೆ. ಕಾಲವಶವಾದ ಸ್ನೇಹದ ಕಳೇಬರಹವನ್ನು ಹೆಗಲಿಂದ ಕೆಳಕ್ಕೆ ಹಾಕಿ ನಮ್ಮ ಪಾಡಿಗೆ ನಾವು ನಡೆದು ಹೋಗುವುದೇ ಈಗ ಉಳಿದಿರುವ ಮಾರ್ಗ.

ನಮ್ಮ ನಡುವಿನ ಸ್ನೇಹ ಕಾಲವಶವಾಗುವುದಕ್ಕೆ ಯಾರನ್ನು ಯಾರೂ ಹೊಣೆಗಾರರನ್ನಾಗಿ ಮಾಡಬೇಕಿಲ್ಲ ಎಂಬುದನ್ನೂ ನಾನು ಬಲ್ಲೆ. ನಮ್ಮ ಸ್ನೇಹ ಹಾಗಾದರೆ ನಿಜವೋ ಅಥವ ಕಟ್ಟಿದ ಒಂದು

ವೇಷವಾಗಿತ್ತೋ? ಈ ಪ್ರಶ್ನೆಗೆ ನನ್ನ ಖಚಿತ ಉತ್ತರವಿದೆ. ಆವತ್ತು ನಮ್ಮ ನಡುವಿನ ಸ್ನೇಹ ನೂರಕ್ಕೆ ನೂರು ಸಹಜ ಅನುಸಂಧಾನವಾಗಿತ್ತು. ಆ ಮಧುರ ಸ್ಮೃತಿಗಾಗಿ ನಾನಂತೂ ಕೃತಜ್ಞನಾಗಿದ್ದೇನೆ. ಹಳೆಯ ಗೆಳೆಯನ ಬಗ್ಗೆ ಬೇಸರಪಟ್ಟುಕೊಳ್ಳುವ ಯಾವ ಅಗತ್ಯವೂ ಇಲ್ಲ ಎಂಬುದನ್ನು ನಾನು ಬಲ್ಲೆ. ಹಾಗೆ ಬೇಸರಪಟ್ಟುಕೊಂಡರೆ ನನ್ನ ಮನಸ್ಸು ಹಾಳಾಗುತ್ತದೆ ಎಂಬುದು ನನಗೆ ಗೊತ್ತು. ಸ್ನೇಹದ ಮಾಜಿತ್ವವನ್ನು ಮಾನ್ಯ ಮಾಡಿದರೆ ನಮ್ಮ ಮನಸ್ಸಿಗೆ ಎಷ್ಟೋ ಸಮಾಧಾನವಾಗುತ್ತದೆ.

ಅದೇ ರೀತಿ ಎಲ್ಲಾ ಕಷ್ಟದ ಸಮಯದಲ್ಲಿ ಅಣ್ಣನಾಗಿ, ಸ್ನೇಹಿತನಾಗಿ, ನನಗೆ ಆಸರೆಯನ್ನು ಕೊಡುತ್ತಾ ಬಂದಿರುವ ದ್ರೌಪದಿಗೆ ಕೃಷ್ಣನ ಸಹಾಯ. ದ್ರೌಪದಿಯ ಅಣ್ಣ ದೃಷ್ಟದ್ಯುಮ್ನ. ಆದರೆ ದ್ರೌಪದಿ ತನಗೆ ಕಷ್ಟ ಒದಗಿದಾಗಲೆಲ್ಲಾ ಮೊರೆಯಿಡುವುದು ತಾನು ಭಾವಿಸಿದ ಅಣ್ಣ ಕೃಷ್ಣನಿಗೆ ! ಅಂದರೆ ಭಾವಿಸುವುದರಿಂದ ಮಾತ್ರ ಸಂಬಂಧ ಧೃಡವಾಗುವುದು ಎಂದಾಯಿತು.

ದ್ರೌಪದಿ ಮತ್ತು ಕೃಷ್ಣ ಅಣ್ಣ ತಂಗಿಯರೋ. ಸ್ನೇಹಿತರೋ? ನನಗೆ ಅನ್ನಿಸುವುದು ತೀವ್ರವಾದ ನೆಲೆಯಲ್ಲಿ ಅವರದ್ದು ಗೆಳೆಯರ ಮಾತನ್ನು ಸ್ವಲ್ಪ ವಿಸ್ತರಿಸಲು ಬಯಸುತ್ತೇನೆ. ಸಮಾನ ದುಃಖವೋ, ಸಮಾನ ಆಸಕ್ತಿಯೋ ದೃಢವಾದ ಸ್ನೇಹದ ಅಗತ್ಯ ಎಂಬುದನ್ನು ನಾನೂ ಒಪ್ಪುತ್ತೇನೆ. ಇಬ್ಬರೂ ಉರಿಯುವುದು ಅತ್ಯಗತ್ಯವೂ ಅಪೇಕ್ಷಣೀಯವೂ ಆದ ಸಂಗತಿ.

ವಸ್ತು ಸ್ಥಿತಿ ಏನೇ ಇರಲಿ ನಾವು ನಮ್ಮ ಗೆಳೆಯರೊಂದಿಗೆ ಸಹ ಅನುಭೂತಿಯನ್ನು ರೂಢಿಸುವ ಮೂಲಕ ನಮ್ಮ ನಮ್ಮ ಕೂಡೊಲೆಗಳನ್ನು ಆರದಂತೆ ಕಾಯ್ದುಕೊಳ್ಳಲ್ಲಿಕ್ಕೇಬೇಕು. ಕೋಟ್ಯಂತರ ವರ್ಷಗಳಿಂದ ನೆಲ ಮತ್ತು ನೀಲಿ ನೀರಿನ ಆದಾನ ಪ್ರಧಾನದ ಜೀವನದ ವ್ಯವರಣೆಯಲ್ಲಿ ತೊಡಗಿಕೊಂಡೇ ಇವೆ ................. ಭೂಮಿಯ ಕೊರಳು ಒಣಗಿದಾಗ ಕ್ಕೂಟ. ಸಾಂಸ್ಕೃತಿಕ, ಸಂಘಟನೆಯಾಗಿ ಅಸ್ತಿತ್ವಕ್ಕೆ ಬಂದಿತು. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಎಪ್ಪತ್ತರ ದಶಕಕ್ಕೆ ಮಹತ್ವವಿದೆ. ಅದು ಸಾಹಿತ್ಯ, ಕಲೆಗಳು ಬೇರೊಂದು ದಿಕ್ಕಿಗೆ ಹೊರಳಿಕೊಂಡ ಕಾಲ. ಈ ಒಕ್ಕೂಟ ಕುವೆಂಪು ಅವರಿಂದ 1974 ರಲ್ಲಿ ಉದ್ಘಾಟನೆಗೊಂಡಿತು. ಇದರಲ್ಲಿದ್ದ ಲಂಕೇಶರು ಪಾಂಚಾಲಿ ಎಂಬ ವಿಶೇಷ ಸಂಚಿಕೆಯೊಂದನ್ನು ರೂಪಿಸಿದರು. ಅನೇಕ ದೃಷ್ಟಿಯಿಂದ ಇದಕ್ಕೆ ಚಾರಿತ್ರಿಕ ಎನ್ನಬಹುದಾದ ಮಹತ್ವವಿದೆ.

ಸಾಂಸ್ಕೃತಿಕ ಲೋಕದ ಆ ಸಂದರ್ಭದಲ್ಲಿ ಪರ್ಯಾಯವಾಗಿ ಅವತರಿಸಿದವಳು. ಪಾಂಚಾಲಿ ಇಲ್ಲಿ ಬಹುಪಾಲು ಶೂದ್ರ, ದಲಿತರ ಲೇಖಕರೆ ಇದ್ದಾರೆ. ತನ್ನ ಒರಗಾದ ರುಚಿ, ದ್ರೌಪದಿಯ ತಲ್ಲಣಗೊಳಿಸುವ ಅಲೌಕಿಕ ಸೌಂದರ್ಯದೊಂದಿಗೆ ಪ್ರಕಟಗೊಂಡ "ಪಾಂಚಾಲಿ" ಮುಂದಿನ ಅನೇಕ ವಿಶೇಷಾಂಕಗಳಿಗೆ

ಪ್ರೇರಣೆಯಾದಂಥದ್ದು ಈಗಲೂ ತನ್ನಲ್ಲಿರುವ ಬರಹಗಳಿಂದ ಈ ತಲೆಮಾರಿನ ಓದುಗರನ್ನು ಬೆಚ್ಚಗಿಡುತ್ತಾಳೆ. ಹಿಂದಿನ ತಲೆಮಾರಿನವರನ್ನು ರೋಮಾಂಚನಗೊಳಿಸುತ್ತಾಳೆ ಎನ್ನುವುದು 'ಪಾಂಚಾಲಿ' ಯ ವಿಶೇಷವಾಗಿದೆ.

'ಪಾಂಚಾಲಿ' ಕೆದಕುವ ನೆನಪುಗಳು ಅಸಂಖ್ಯ, ಭಾರತೀಯನ ಬದುಕು, ಜಾತಿ, ಮತ, ಕಂದಾಚಾರಗಳ ಹತ್ತಿರ ಕೂಡ ಬರದಿದ್ದಾಗ ಈಕೆ ನಾವು ಕಳೆದುಕೊಂಡ ಎಲ್ಲದಕ್ಕೆ, ನಾವು ಪಡೆಯಬೇಕಾದ ಹಲವು ಮೌಲ್ಯಗಳಿಗೆ ಸಂಕೇತವಾಗಿದ್ದಾಳೆ.

ಹಟಕ್ಕೆ ಹೆಸರಾದವಳು ಪಾಂಚಾಲಿ: ಪ್ರೇಮಕ್ಕೆ ಮತ್ತು ಸರಕ್ಕೆ ಕೂಡ. ಕೃಷ್ಣೆಯೆಂದೂ ಖ್ಯಾತಳಾದ ಈಕೆಯ ಇಂಪಾದ ಹೆಸರಿನ ಹಿಂದೆ ದುರಂತವೇ ಅಡಗಿದೆ.

ಯುದ್ಧವಾದದ್ದು ಇವಳಿಂದ, ಇವಳಿಗಾಗಿ ಎಲ್ಲ ಯುದ್ಧಗಳಂತೆ ಕುರುಕ್ಷೇತ್ರದ ಕದನ ಕೂಡ ಬಣ್ಣ ಬಣ್ಣದ ಒಳಿತುಗಳಿಂದಲೂ ವಿಚಿತ್ರ ಶೂನ್ಯಗಳಿಂದಲೂ ಕೂಡಿದೆ. ಆದ್ದರಿಂದಲೇ ಪಾಂಚಾಲಿಯದು ದುಃಖ ಮಾತು ಸಾಧನೆಯ ಹಟ ಮತ್ತು ಪರಮ ನಿರರ್ಥಕತೆಯ ಕತೆಯಾಗಿದೆ.

ಎಲ್ಲಕ್ಕಿಂತ ಮುಖ್ಯವಾಗಿ, ಪಂಚಪಾಂಡವರನ್ನು ವರಸಿ ಆರನೆಯ ಕರ್ಣನತ್ತ ತುಡಿಯುತ್ತಿದ್ದ ಈಕೆ ತೀವ್ರ ಜೀವನಾರಾಧನೆಗೆ, ಆದ್ದರಿಂದಲೇ ನೈತಿಕ ಎಚ್ಚರಕ್ಕೆ ಸಾಕ್ಷಿಯಾಗಿದ್ದಾಳೆ.

ಕೃಷ್ಣಯರಂತೆ ಕರಿಯ, ಕಾಳಿಯರತ್ತ ನಮ್ಮ ಗಮನ, ನಮ್ಮ ಶ್ರದ್ಧೆ ಹರಿಯಬೇಕಾಗಿದೆ. ಇದನ್ನು ಹಟದಿಂದ ಮತ್ತು ಪ್ರೀತಿಯಿಂದ, ಧೈರ್ಯದಿಂದ ಮತ್ತು ವಿನಯದಿಂದ ಸಾಧಿಸಬೇಕಾಗಿದೆ. ಈ ಸಂಕೇತ ಮತ್ತು ವಾಸ್ತವಿತೆಯ ಸಂದರ್ಭದಲ್ಲೇ ನಮ್ಮ 'ಪಾಂಚಾಲಿ' ಮತ್ತು 'ಒಕ್ಕೂಟ' ದ ಅಸ್ತಿತ್ವವಿದೆ.

## ಅಧ್ಯಾಯ 7

## ಉಪಸಂಹಾರ

ದ್ರೌಪದಿಯ ವ್ಯಕ್ತಿತ್ವವು ತನ್ನ ಸಂಕೀರ್ಣವಾದ ಸ್ವರೂಪದಿಂದಾಗಿ ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆ. ಅವಳ ಲೋಕೋತ್ತರವಾದ ಸೌಂದರ್ಯ ಮತ್ತು ಗುಣಸಂಪನ್ನತೆಗಳು ಅವಳ ಕೃಷ್ಣೆ ಎನ್ನುವ ಹೆಸರನ್ನು ಅನ್ವರ್ಥಗೊಳಿಸಿವೆ. ಅವಳು ಏಕಕಾಲಕ್ಕೆ ಹೆಣ್ತನದ ಆದರ್ಶ ಕಲ್ಪನೆಯನ್ನೂ, ವಾಸ್ತವದಲ್ಲಿ ಅನಿವಾರ್ಯವಾಗಿ ನಡೆಸಬೇಕಾದ ಸಂಘರ್ಷವನ್ನು ಸ್ಪಷ್ಟಪಡಿಸುತ್ತಾಳೆ. ಅವಳು ಪಾಂಡವರ ಒಗ್ಗಟ್ಟಿನ ಮೂಲವಾಗಿದ್ದವಳು. ತನ್ನ ಮಿತಿಗಳನ್ನು ಒಪ್ಪಿಕೊಂಡು ಕೂಡಾ ಬದುಕಿನ ಉದ್ದಕ್ಕೂ ಪುರುಷರ ಅಹಂಕಾರಕ್ಕೆ ಸವಾಲಾಗಿಯೇ ಉಳಿದವಳು. ಎಂಬುದನ್ನು ಹಲವು ಅಧ್ಯಯನದ ಮೂಲಕ ವಿಶೇಷಿಸಲಾಗಿದೆ.

ದ್ರೌಪದಿಯ ಸಂಘರ್ಷವು ಪಡೆಯುವ ವಿವಿಧ ಆಯಾಮಗಳೂ ಇಲ್ಲಿ ಪ್ರಸ್ತುತವಾಗುತ್ತದೆ. ಅವಳೂ ಸಾಮಾನ್ಯ ಮನುಷ್ಯಳೇ ಆಗಿದ್ದಳು. ಅವಳಲ್ಲೂ ಸಹಜವಾದ ದೌರ್ಬಲ್ಯಗಳಿದ್ದವು. ಕೀಳು ಸ್ವಭಾವವೆನ್ನುವುದು ಅವಳಲ್ಲಿಯೂ ಇತ್ತು. ಅದು ಕೆಲವೊಮ್ಮೆ ನೈಜಾನುಸಂಧಾನದ ರೂಪದಲ್ಲಿ ಕೆಲವೊಮ್ಮೆ ಅನಗತ್ಯವಾದ ಆವೇಶವಾಗಿ, ಕೆಲವೊಮ್ಮೆ ಆಕ್ರಮಣ ಪ್ರವೃತ್ತಿಯಲ್ಲಿ ಪರಿಣಮಿಸುವುದನ್ನು ಕಾಣುತ್ತೇವೆ. ಬದುಕಿನ ಉದ್ದಕ್ಕೂ ನಡೆಸಿದ ಸಂಘರ್ಷವು ಹಲವು ಸಂದರ್ಭಗಳಲ್ಲಿ ಗೆದ್ದಳು. ಕೆಲವು ಸನ್ನಿವೇಶ, ಸಂದರ್ಭಗಳಲ್ಲಿ ಅವಳನ್ನು ಗೆದ್ದುಕೊಂಡಿತು. ದ್ರೌಪದಿಯು ಬದುಕಿನಲ್ಲಿ ಏಕಾಂತ ಪ್ರಜ್ಞೆಯಿಂದ ಬಳಲಿದವಳು. ಇದಕ್ಕೆ ಅವಳಷ್ಟೇ ಅವಳ ಬದುಕಿನಲ್ಲಿ ಹಾದುಹೋದ ಪ್ರಸಂಗಗಳನ್ನು ಉದ್ದೇಶ; ವ್ಯಾಪ್ತಿ, ಮತ್ತು ಸ್ವರೂಪಗಳಲ್ಲಿ ಚರ್ಚಿಸಲಾಗಿದೆ. ವ್ಯಾಸರ ಮಹಾಭಾರತವನ್ನು ಮತ್ತೆ ಮತ್ತೆ ರಚಿಸುವ ಪ್ರಯತ್ನಗಳನ್ನು ಹಳಗನ್ನಡ ಕಾವ್ಯಗಳಿಗೇ ಸೀಮಿತವಾದಗಿದೆ.

ಎರಡನೆಯ ಅಧ್ಯಾಯದಲ್ಲಿ ವ್ಯಾಸರ ಮಹಾಭಾರತದಲ್ಲಿ ದ್ರೌಪದಿಯೇ ಯುದ್ಧದ ಚಾಲಕ ಶಕ್ತಿಯಾಗಿದ್ದಾಳೆ. ದ್ರೌಪದಿಯ ಹುಟ್ಟಿನ ಹಿನ್ನೆಲೆಯಲ್ಲಿ ಸಾಂಪ್ರದಾಯಕ ನೆಲೆಗಳನ್ನು ವಿಶ್ಲೇಷಿಸಲಾಗಿದೆ. ಹಾಗೂ ದ್ರೌಪದಿಯ ಬಗ್ಗೆ ಹತ್ತನೇ ಶತಮಾನದಲ್ಲಿದ್ದ ಕವಿ ಪಂಪ, ರನ್ನ, ಕುಮಾರವ್ಯಾಸರು ಮಹಾಭಾರತ ಕಥೆ, ವಿಷಯ, ವಸ್ತು, ಪಾತ್ರಗಳಲ್ಲಿ ಕಾವ್ಯದ ಮೂಲಕ ದ್ರೌಪದಿಯ ಬಗ್ಗೆ ಎರಡನೇಯ ಅಧ್ಯಾಯದಲ್ಲಿ ವಿಶ್ಲಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಆಧುನಿಕ ಸಾಹಿತ್ಯದ ಪ್ರಕಾರಗಳಲ್ಲಿ ದ್ರೌಪದಿಯ ಪಾತ್ರವು ವಿವಿಧ ಪ್ರಕಾರದಲ್ಲಿ ಹೊರಹೊಮ್ಮಿದ ರೀತಿಯನ್ನು ಚರ್ಚಿಸಿ, ವಿಶ್ಲಷಿಸಲಾಗಿದೆ. ಕಾದಂಬರಿಗಳ ಮೂಲಕ ದ್ರೌಪದಿಯ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಾಯವು ವ್ಯಾಪ್ತಿಯ ದೃಷ್ಟಿಯಿಂದ ಸೀಮಿತವಾಗಿದೆ. ಇದು ಪ್ರಾಯೋಗಿಕ

ಸ್ವರೂಪದ್ದಾಗಿದ್ದು ಈ ನಿಟ್ಟಿನ ಅಧ್ಯಯನದ ಸಾಧ್ಯತೆಗಳನ್ನು ಹುಡುಕುವಷ್ಟಕ್ಕೆ ಮುಕ್ತಾಯಗೊಳ್ಳುತ್ತದೆ. ಪುರಾಣಗಳೊಳಗಿನ ಕಥಾ ಪ್ರಸಂಗಗಳನ್ನು ಇಡಿಯಾಗಿ ಬಿಡಿಯಾಗಿ ಕಾದಂಬರಿಗಳಲ್ಲಿ ಕಥೆಯನ್ನು ಕಾದಂಬರಿಕಾರರು ಹೇಳಿದ್ದಾರೆ. ಕಾದಂಬರಿಯ ವಸ್ತು ಪೌರಾಣಿಕವೇ ಆದರೂ ಕಾದಂಬರಿಕಾರರ ದೃಷ್ಟಿ ಆಧುನಿಕವಾಗಿದೆ. ಹೀಗೆ ಹಲವು ಕಾದಂಬರಿಕಾರರೂ ದ್ರೌಪದಿಯನ್ನು ಕೇಂದ್ರಿತ ವಸ್ತುವಾಗಿ ಅತಿಮಾನುಷ ಘಟನೆಗಳು ಪವಾಡಗಳೆಂಬಂತೆ ತೋರಿ ಅವನ್ನು ಮತ್ತೆ ಮಾನವೀಯ ನೆಲೆಗಳಲ್ಲಿ ಪುನರ್‌ರಚಿಸುವ ಪ್ರಯತ್ನಗಳು ಮಹಾಭಾರತದ ಕಥೆಯನ್ನು ಕಾದಂಬರಿಯಲ್ಲಿ ಹೇಗೆ ಅಳವಡಿಸಿದ್ದಾರೆ. ಎಂಬುದನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ನಾಟಕಗಳಲ್ಲಿ ಹೆಚ್ಚಾಗಿ ಕಂಡುಬರುವಂತದ್ದು ಪುರಾಣ ಕಥೆಗಳು. ಪರಂಪರಾನುಗತವಾಗಿ ರೂಢಿಯಲ್ಲಿರುವ ಧಾರ್ಮಿಕ ಆಚರಣೆಗಳ ವಿವರಣೆಯಂತೆ ಪುರಾಣ ಕಥೆಗಳಿರುತ್ತವೆ. ದ್ರೌಪದಿಯ ಪಾತ್ರವನ್ನು ಆಧುನಿಕ ನಾಟಕಕಾರರು ವಿವೇಚಿಸಿದ ರೀತಿಯನ್ನು ನಾಲ್ಕನೇ ಅಧ್ಯಾಯದ ಮೂಲಕ ನೋಡಬಹುದಾಗಿದೆ.

ಸ್ತ್ರೀ ಸಂವೇದನೆ ಸಾಹಿತ್ಯ ಕೊಡುಗೆ ಕನ್ನಡ ಸಾಹಿತ್ಯಕ್ಕೆ ಗರಿ ಮೂಡಿಸಿದೆ. ಕಳೆದ ಶತಮಾನದಿಂದಲೂ ಕಾವ್ಯ ರಚನೆಯಲ್ಲಿ ಕೆಲವು ಲೇಖಕಿಯರು ಉತ್ತಮೋತ್ತಮ ಕವಿತೆಗಳನ್ನು ರಚಿಸಿದ್ದಾರೆ. ಅದರಲೂ ಪೌರಾಣಿಕ ಕಾವ್ಯವನ್ನು ಇಂದಿನ ಆಧುನಿಕ ಕಾವ್ಯಕ್ಕೆ ಮಹಿಳೆಯರು ತಮ್ಮ ಬರವಣಿಗೆಯ ಮೂಲಕ ಪುರಾಣ ಇತಿಹಾಸಗಳಲ್ಲಿ ಪುರುಷ ಪ್ರಧಾನತೆಯನ್ನು ಧಿಕ್ಕರಿಸಿ ನಡೆದ ಸ್ತ್ರೀಯರ ಬಗ್ಗೆ ಮಹಿಳಾ ಕವಿಗಳು ಮೆಚ್ಚುಗೆಯನ್ನು ಹೇಗೆ ವ್ಯಕ್ತಪಡಿಸಿದ್ದಾರೆ. ಎಂಬುದನ್ನು ಹಲವು ಲೇಖಕಿಯರು ಬರೆದಿರುವ ಕಾವ್ಯವನ್ನು ವಿಶೇಷಿಸಲಾಗಿದೆ.

ಮಹಾಭಾರತ ಉದ್ದಕೂ ತುಂಬಿರುವ ಅತಿಮಾನುಷ ಘಟನೆಗಳನ್ನು ಸಂಭವನೀಯವಾದ ದೃಷ್ಟಿಯಿಂದ ಪುನಾರಚಿಸುವ ಕಾರ್ಯವನ್ನು ಮತ್ತೇ ಮತ್ತೆ ಶೋಧನೆಗೆ ಒಳಗಾಗುತ್ತಲೇ ಬಂದಿದೆ. ಮಹಾಭಾರತದಲ್ಲಿ ಪಾತ್ರಗಳ ಅತಿಮಾನವೀಯ ಪೊರೆಯನ್ನು ಕಳಚಿ ಅವುಗಳನ್ನು ಸಾಮಾನ್ಯ ಮಾನವೀಯ ಭೂಮಿಗೆ ತಂದು ಆಧುನಿಕ ಸಂಧರ್ಭದಲ್ಲಿ ಹಲವು ಲೇಖನಗಳು, ವಿಮರ್ಶೆಗಳು, ಹಾಗೂ ಪ್ರಬಂಧ ಸಂಕಲನಗಳನ್ನು ವಿಶ್ಲೇಷಿಸುವ ಮೂಲಕ ದ್ರೌಪದಿಯ ಪಾತ್ರ ಚಿತ್ರಣದ ವಿವಿಧ ಸ್ವರೂಪಗಳನ್ನು ನಿರೂಪಿಸಲಾಗಿದೆ.

ಈ ಹಿನ್ನೆಲೆಯಲ್ಲಿ ದ್ರೌಪದಿಯ ಮೂಲಕ ಮಹಾಭಾರತದ ಪಾತ್ರಗಳನ್ನು ನೋಡುವ ಪ್ರಯತ್ನವನ್ನು ಈ ಅಧ್ಯಯನ ಮಾಡುತ್ತದೆ. ಆಧುನಿಕ ಸಾಹಿತ್ಯದಲ್ಲಿಯೂ ಕಾಣಿಸಿಕೊಂಡಿರುವ ದ್ರೌಪದಿಯ ಪಾತ್ರವು ಕಾವ್ಯ, ಕಥೆ, ಕಾದಂಬರಿ, ನಾಟಕ, ಕವನ ಇವುಗಳಲ್ಲಿ ಹೇಗೆ ವ್ಯಕ್ತವಾಗಿ ರೂಪುಗೊಂಡಿದೆ ಎಂಬ ಉದ್ದೇಶವನ್ನು ಇಲ್ಲಿ ಇಟ್ಟುಕೊಳ್ಳಲಾಗಿದೆ. ಅನುಷಂಗಿಕವಾಗಿ ಇತರ ಪಾತ್ರಗಳ ಸಂಬಂಧದ ನೆಲೆಗಳನ್ನೂ ವಿಶ್ಲೇಷಿಸಲಾಗಿದೆ. ತನ್ನ ಶಾರೀರಿಕ ಭಾವನಾತ್ಮಕ ಅವಶ್ಯಕತೆಗಳನ್ನು ಅವಳು ಎಷ್ಟರ ಮಟ್ಟಿಗೆ ತೆರೆದಿಡಬಲ್ಲಳು? ಅವಳ ಮೇಲೆ ನಡೆದ ದಬ್ಬಾಳಿಕೆಯ ಸ್ವರೂಪವೇನು? ಈ ದಮನಕಾರಿ ಪ್ರವೃತ್ತಿಯನ್ನು ಅವಳು ಎದುರಿಸಿದ ರೀತಿ ಯಾವುದು? ಯಾವ ರೀತಿಯ ಆಂತರಿಕ ದ್ವಂದ್ವವನ್ನು ಅವಳು ಬದುಕಿನುದ್ದಕ್ಕೂ ಅನುಭವಿಸಿದಳೂ? "ವ್ಯಾಸಭಾರತ, ಪಂಪಭಾರತಗಳ ವಸ್ತ್ರಾಪಹರಣ ಪ್ರಸಂಗದಲ್ಲಿ ಆಕೆ ಮಾಡಿದ ಪ್ರತಿಜ್ಞೆ, ಅನ್ಯಾಯದ ವಿರುದ್ಧ ಎತ್ತಿದ ಧ್ವನಿಯೇ ಆಗಿದೆ. ದುರ್ಯೋಧನನ ತೊಡೆ ಮುರಿದ ಸಂದರ್ಭ, ದುಶ್ಯಾಸನನ ಮರಣದ ಸಂದರ್ಭಗಳಲ್ಲಿ ಆಡುವ ಕಟೂಕ್ತಿಗಳು ಅವಳು ವ್ಯಕ್ತಪಡಿಸಿದ ಪರ್ಯಾಯ ಪ್ರತಿಭಟನೆಗಳೇ ಎನಿಸಿವೆ"(*l) ........ ಅನಧಿಕೃತ ಸಾಮಾಜಿಕ ಕಟ್ಟಳೆ ಗೊತ್ತಿದ್ದೂ ಅದನ್ನು ದಾಟುವ ರೀತಿಯಲ್ಲಿ, ಧರ್ಮರಾಜನನ್ನು ಕುರಿತು ವನವಾಸ ಪ್ರಸಂಗದಲ್ಲಿ ಆಡಿದ ನಿಂದೆಯಲ್ಲಿ ತಣ್ಣನೆಯ ಪ್ರತಿಭಟನೆಯಿದೆ ಹೌದೆ? ನಿಜವಾಗಿಯೂ ದ್ರೌಪದಿಯ ವ್ಯಕ್ತಿತ್ವದಲ್ಲಿ ಬಂಡಾಯದ ಪ್ರವೃತ್ತಿಯಿತ್ತೇ? ಎನ್ನುವ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನವಷ್ಟೇ ಇಲ್ಲಿದೆ.

---

(*lಕಲಬುರ್ಗಿ ಎಂ. ಎಂ. ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ: 1989, ಪು. 27)

<u>ಆಕರ ಗ್ರಂಥಗಳು</u>


1. ಅಮೂರ ಜಿ.ಎಸ್ : 'ಕನ್ನಡ ಕಥಾ ಸಾಹಿತ್ಯ' ಕಾಂದಬರಿ ಧಾರವಾಡ, ಶ್ರೀ ಹರಿಪ್ರಕಾಶನ, 1998

2. ಪ್ರಭಾವತಿ ಎಸ್.ಎ: ಕನ್ನಡ ಸಾಹಿತ್ಯದಲ್ಲಿ 'ದ್ರೌಪದಿ' ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು, 1992

3. ಭೈರಪ್ಪ ಎಸ್.ಎಲ್ : 'ಪರ್ವ' ಬೆಂಗಳೂರು ಸಾಹಿತ್ಯ ಭಂಡಾರ, ಬೆಂಗಳೂರು 1979,

4. ಆದ್ಯ ರಾಮಾಚಾರ್ಯ: 'ಪಾಂಚಾಲಿ' ವರದರಾಜ. ಪ್ರಕಾಶನ. ಬೆಂಗಳೂರು 1996

5. ಸತ್ಯಕಾಮ: 'ಜೆಂಕಿಯ ಮಗಳು' ಪ್ರತಿಮಾ ಗ್ರಂಥಮಾಲೆ, ಧಾರವಾಡ, 1977

6. ಡಾ॥ ಜಿ.ಕೆ.ರಮೇಶ : 'ಕನ್ನಡ ಪೌರಾಣಿಕ ಕಾದಂಬರಿಗಳು' ಅನಘ ಸಿರಿ ಪ್ರಕಾಶನ, ಮೈಸೂರು, 2008

7. ಮರುಳಸಿದ್ದಪ್ಪ. ಕೆ: 'ಆಧುನಿಕ ಕನ್ನಡ ನಾಟಕ' ಬೆಂಗಳೂರ ಲಿಪಿ ಪ್ರಕಾಶನ, 1993

8. ಸುಮಿತ್ರಾಭಾಯಿ ಜಿ.ಎಸ್. 'ಸ್ತ್ರೀವಾದಿ ಪ್ರವೇಶಿಕೆ' ಬೆಂಗಳೂರು ಕರ್ನಾಟಕ ಲೇಖಕಿಯರ ಸಂಘ, 1995

9. ಡಾ॥ ಮಣಿಮಾಲಿನಿ ಎ. ಕೆ. :'ದ್ರೌಪದೀ ಸಮೀಕ್ಷೆ' ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, 1999

10. ಕೆ.ಉಷಾ ಪಿ.ರೈ : 'ಹಕ್ಕಿ ಮತ್ತು ಗಿಡುಗ' ಸಾತ್ವಿಕ, ಪ್ರಕಾಶನ ಬೆಂಗಳೂರು.2004

11. ಎಸ್.ಪಿ. ಪ್ರಭಾವತಿ 'ಭೂಮಿ'ನಾಗಶ್ರೀ ಪ್ರಕಾಶನ ಬೆಂಗಳೂರು. 2002

12. ಶಾಂತಾಜಗದೀಶ್ 'ಮೌಲ್ಯ' ಭಾವಸಂಪದ,ಪ್ರಕಾಶನ ಮೈಸೂರು.1990.

13. ಮಂಜುಳಾಶೆಟ್ಟಿ: 'ದ್ರೌಪದಿಯ ಸ್ವಗತ' ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್2010

14. ವೆಂಕಟರಾಜ ಪುಣಿಚಂತ್ತಾಯ: 'ಪಾಂಚಾಲಿ' ಪ್ರಬಂಧ ಸಂಕಲನ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2002

15. ಎಂ.ವಿ.ಸೀತಾರಾಮಯ್ಯ: 'ಶೃಂಗಾರ ವಿಹಾರ' ರಾಘವ ಪ್ರಕಾಶನ ಬೆಂಗಳೂರು 1986

16. ಜಿ.ಪಿ.ರಾಜರತ್ನಂ: 'ಕೈಲಾಸಂ ಕೀಚಕ' ಓಂದ್ ಕಿತಾಬ್ಸ್ ಲಿಮಿಟೆಡ್ ಶೇಷಾದ್ರಿಪುರಂ ಬೆಂಗಳೂರು 1950

17. ಗುಂಡ್ಲುಪೇಟೆ ಜವರೇಗೌಡ :'ಭೀಮನ ಗರ್ವಭಂಗ' ಪ್ರಕಾಶನ ಮೈಸೂರು 2009

18. ರಾಜಪ್ಪ ದಳವಾಯಿ:'ಸುಯೋಧನ' ಭಾಗ್ಯಶ್ರೀ ಪ್ರಕಾಶನ ಮಂಗಳೂರು 2002

19. ಜಿ.ಪುಟ್ಟಸ್ವಾಮಯ್ಯ : 'ಕುರುಕ್ಷೇತ್ರ' ಪರಿಮಳ ಎಂಟರ್ ಪ್ರೈಸಸ್ ಬೆಂಗಳೂರು1992

20. ಡಾ॥ವಿಜಯಾ ಸುಬ್ಬರಾಜ್ 'ಮಂಥನ': ವಿಮರ್ಶಾಲೇಖನ ಮಂಗಳ ಪ್ರಕಾಶನ ರಾಜರಾಜೇಶ್ವರಿನಗರ, ಬೆಂಗಳೂರು

21. ಎಚ್.ಎಸ್.ವೆಂಕಟೇಶಮೂರ್ತಿ: 'ಸ್ನೇಹದ ಸೊಬಗು' ಪ್ರಜಾವಾಣಿ ಲೇಖನ 2011

22. ಡಾ॥ವಿಜಯಾ ಸುಬ್ಬರಾಜ್ : 'ತ್ರಿಶಂಕು' ನುಡಿ ಮುದ್ರಣ ಪ್ರಕಾಶನ 1982